CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೩೯ | ಬೆಂಗಳೂರು, ಗುರುವಾರ, ಡಿಸೆಂಬರ್ ೩೦, ೨೦೦೪ (ಪುಷ್ಯ ೨, ಶಕ ವರ್ಷ ೧೯೨೬) | ಸಂಚಿಕೆ ೫೨ |
|---|---|---|


## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ

**ಸಂಖ್ಯೆ: ಕಾಪಕಾ:ಎಫ್:ಎಸ್‌ಆರ್-50:2004**

**ಅರ್ಜಿದಾರರು:**

1. ಶ್ರೀಮತಿ ಶೀಲಾ ಕೋಂ ಲೇಟ್ ಸತೀಶ
2. ಕು: ಸುಶ್ಮಿತ ಬಿನ್ ಲೇಟ್ ಸತೀಶ, 3 ವರ್ಷ,
3. ಯತೀಶ ಬಿನ್ ಲೇಟ್ ಸತೀಶ, 10 ತಿಂಗಳು
4. ಮುದ್ದೇಗೌಡ ಬಿನ್ ಮಾಯೇಗೌಡ, 65ವರ್ಷ.
5. ಶ್ರೀಮತಿ ಗೌರಮ್ಮ ಕೋಂ ಮುದ್ದೇಗೌಡ, 60 ವರ್ಷ.
   ವಾಸ: ಮಾರೇನಹಳ್ಳಿ ಗ್ರಾಮ, ಶಾಂತಿಗ್ರಾಮ ಹೋಬಳಿ, ಹಾಸನ ತಾಲ್ಲೂಕು.

ವಿರುದ್ಧ

**ಪ್ರತಿವಾದಿಗಳು**

1. ಶ್ರೀ ಬಿ. ರವಿರಾಜಶೆಟ್ಟಿ, ನಂ.312, 9ನೇ ಮೇನ್, 1ನೇ ಹಂತ ಹೆಣ್ಣೂರು ಬಾಣಸವಾಡಿ ರಸ್ತೆ, ಬೆಂಗಳೂರು-560003.
2. ಮೆ: ನ್ಯೂ ಇಂಡಿಯಾ ಇನ್‌ಶ್ಯೂರೆನ್ಸ್ ಕಂಪನಿ ಲಿ., ಕಸ್ತೂರಬಾ ರಸ್ತೆ, ಬೆಂಗಳೂರು.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಸತೀಶ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 29.10.2002ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ಅವಲಂಬಿತರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಎನ್. ರಾಮಕೃಷ್ಣ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

ಪಿ.ಆರ್. 1723

### ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ

**ಸಂಖ್ಯೆ: ಕಾಪಕಾ:ಎಫ್:ಎಸ್‌ಆರ್-56:2004**

**ಅರ್ಜಿದಾರರು:**

1. ಶ್ರೀಮತಿ ಸರೋಜಮ್ಮ ಕೋಂ ಲೇಟ್ ಶಂಕರೇಗೌಡ, 30 ವರ್ಷ.
2. ರೇಖಾ ಬಿನ್ ಲೇಟ್ ಶಂಕರೇಗೌಡ, ಸುಮಾರು 15 ವರ್ಷ.
3. ಉಮೇಶ್ ಬಿನ್ ಲೇಟ್ ಶಂಕರೇಗೌಡ, ಸುಮಾರು 14 ವರ್ಷ.
   ವಾಸ: ಯಡಿಯೂರು ಗ್ರಾಮ, ಕಸಬಾ ಹೋಬಳಿ, ಹಾಸನ ತಾಲ್ಲೂಕು.

ವಿರುದ್ಧ

**ಪ್ರತಿವಾದಿಗಳು**

1. ಶ್ರೀ ಕೆ. ಅನಂತರಾಮಯ್ಯ, ವಕೀಲರು, ಕೆಎ-02-ಎನ್-1055 ಮಾರುತಿ ಕಾರಿನ ಮಾಲೀಕರು, "ಆಡಿ-1000, ದೊಡ್ಡ ರಸ್ತೆ, ಹಾಸನ.
2. ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ.ಲಿ., ವಿಭಾಗೀಯ ಕಛೇರಿ, ಎಸ್.ವಿ. ನಿಲಯ, ಬಿ.ಎಂ. ರಸ್ತೆ, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶಂಕರೇಗೌಡ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 13.09.2004ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ಅವಲಂಬಿತರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಎನ್. ರಾಮಕೃಷ್ಣ**
ಪಿ.ಆರ್. 1724
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ

**ಸಂಖ್ಯೆ: ಕಾಪಕಾ:ಎಫ್:ಎಸ್ಆರ್-55:2004**

**ಅರ್ಜಿದಾರರು:**

1. ಲಲ್ಲಿ ಲೋಬೋ ಅಲಿಯಾಸ್ ಪ್ರಾಸ್ಕಲ್ಯ ಲೋಬೋ ಕೋಂ ಲೇಟ್ ಎಂ. ಹರಳಪ್ಪ ಅಲಿಯಾಸ್ ಅರಳಪ್ಪ, 45 ವರ್ಷ.
2. ಕು: ಶಿಲ್ಪ ರೆಹನಾ ಬಿನ್ ಲೇಟ್ ಎಂ. ಹರಳಪ್ಪ ಉರುಫ್ ಅರಳಪ್ಪ, 21 ವರ್ಷ.
3. ಹಿಲ್ಡ ಮೇರಿ ಬಿನ್ ಲೇಟ್ ಎಂ. ಹರಳಪ್ಪ ಉರುಫ್ ಅರಳಪ್ಪ, 19 ವರ್ಷ.
4. ಜಾನ್ ಪ್ರದೀಪ್ ಬಿನ್ ಲೇಟ್ ಎಂ. ಹರಳಪ್ಪ ಉರುಫ್ ಅರಳಪ್ಪ, 17 ವರ್ಷ.
ವಾಸ: ಕುದುರುವಳ್ಳಿ ಕೊಪ್ಪಲು ಗ್ರಾಮ, ಕಂದೂರು ಹೋಬಳಿ, ಆಲೂರು ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು**

1. ಶ್ರೀ ಎಸ್.ಎನ್. ಸತೀಶ್ ಬಿನ್ ಬಿ.ನಾಗರಾಜ್, ಲಾರಿ ಮಾಲೀಕರು, ಲಕ್ಷ್ಮಿಪುರಂ, ಸಕಲೇಶಪುರ (ಕೆಎ-13:ಸಿ:2744ರ ಲಾರಿ ಮಾಲೀಕರು)
2. ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂಪನಿ ನಿಯಮಿತ., ವಿಭಾಗೀಯ ಕಛೇರಿ, ಎಸ್.ವಿ. ನಿಲಯ, ಬಿ.ಎಂ. ರಸ್ತೆ, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಎಂ. ಹರಳಪ್ಪ ಉ:ಅರಳಪ್ಪ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 18.08.2004ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ಅವಲಂಬಿತರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಎನ್. ರಾಮಕೃಷ್ಣ**
ಪಿ.ಆರ್. 1725
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ

**ಸಂಖ್ಯೆ: ಕಾಪಕಾ:ಎಫ್:ಎಸ್ಆರ್-54:2004**

**ಅರ್ಜಿದಾರರು:**

1. ಶ್ರೀ ನಾಗರಾಜು ಅಲಿಯಾಸ್ ನಾಗಯ್ಯ ಬಿನ್ ತಿಮ್ಮಯ್ಯ, 48 ವರ್ಷ.
2. ಶ್ರೀಮತಿ ಸಾಕಮ್ಮ ಕೋಂ ನಾಗರಾಜು ಅಲಿಯಾಸ್ ನಾಗಯ್ಯ, ವಯಸ್ಸು 40 ವರ್ಷ.
3. ಸೋಮೇಶ ಬಿನ್ ನಾಗರಾಜ ಅಲಿಯಾಸ್ ನಾಗಯ್ಯ, ವಯಸ್ಸು 14 ವರ್ಷ.
ವಾಸ: ಸೋರಲುಮಾವು ಗ್ರಾಮ ಮತ್ತು ಅಂಚೆ, ಹಂದಿನಕೆರೆ ಹೋಬಳಿ, ಚಿಕ್ಕನಾಯಕನ ಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು**

1. ಶ್ರೀ ಗೋವಿಂದಪ್ಪ ಬಿನ್ ಗವಿಯಪ್ಪ, ಮನೆ ನಂ.724, 1ನೇ ಮುಖ್ಯ ರಸ್ತೆ, 1ನೇ ಮೇನ್, ಕಾಮಾಕ್ಷಿ ಪಾಳ್ಯ, ಬೆಂಗಳೂರು-79. (ಕೆಎ-11-3535 ಮಿನಿ ಲಾರಿ ಮಾಲೀಕರು).
2. ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂಪನಿ ಲಿ., ಚಾಮರಾಜಪೇಟೆ ಬ್ರಾಂಚ್, ಬೆಂಗಳೂರು.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಅಣ್ಣಪ್ಪ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 18.11.2003ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ಅವಲಂಬಿತರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಎನ್. ರಾಮಕೃಷ್ಣ

ಪಿ.ಆರ್. 1726

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

## COMMERCIAL TAXES DEPARTMENT

## OFFICE OF THE COMMERCIAL TAX OFFICER, 29th CIRCLE, BANGALORE

## NOTIFICATION

### No.453/ 04-05, Bangalore, Dated: 6th December, 2004

It is hereby notified to the notice of general public that the statutory forms/ declaration forms issued to the following dealers as detailed noted against each dealers are treated as invalid due to non-availability of the concerned assessee after obtaining the registration in this office. Any persons attempt to use the following statutory/ declaration forms are themselves responsible for it further consequences.

| Sl. No. | Name and Address of the assessee with RC. No. | Date of issue | Sl.No. of the declaration forms | Total No.of Forms issued |
|---|---|---|---|---|
| 1 | 2 | 3 | 4 | 5 |
| 1. | M/s. R.C. Sales Corporation No.671, 2nd Block, 2nd Stage, Basaveshwaranagar, Bangalore-560079.<br>R.C. No. KST-77322290/ 77372293 | 04.02.1998 | C' Forms From Sl.No. 574687 to 574691 | 5 Nos. of C Forms |

COMMERCIAL TAX OFFICER,
29th CIRCLE, BANGALORE.

PR-1731

## HIGH COURT OF KARNATAKA, BANGALORE

## NOTIFICATION

### No.LCA I/402/2004, Dated: 10th December, 2004

In exercise of the powers conferred on the Chief Justice of the High Court of Karnataka under sub-section (10) of Section 11 of the Arbitration and Conciliation Act, 1996 (Central Act No.26 of 1996) and in partial modification of the scheme bearing No.LCA I/402/1996, dated: 13.11.1996, published in the Karnataka Gazette dated: 12.12.1996, I hereby substitute Clause 7 of the scheme as follows:

*Clause. 7. **Notice of the request to other party:** Subject to the provisions of paragraph 6, the Chief Justice or the person or the institution designated by him shall direct that a notice of the request be given to all the parties to the arbitration agreement and such other person, so that if it so chooses, assist the Chief Justice or his designate in the nomination of the arbitrator and such notice shall be accompanied by copies of all documents referred to in paragraph 2 or, as the case may be, by information or clarification, if any sought under paragraph 5.

By Order of the Chief Justice,

**N. ANANDA**

REGISTRAR GENERAL.

PR-1735

## DIRECTORATE OF ECONOMICS AND STATISTICS, GOVERNMENT OF KARNATAKA, BANGALORE-1

### Consumer Price Index Numbers for Industrial Workers

No. DES 24 PWX 2004 — Month: August 2004

State: Karnataka — Base: 1987-88=100 — Date : 29-10-2004

| | Group/Sub -Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Mysore | Raichur | Tumkur |
|---|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| I. | **FOOD:** | | | | | | | | | | | | |
| | (a) Cereals & Products | 328 | 398 | 374 | 353 | 346 | 340 | 346 | 340 | 281 | 376 | 341 | 322 |
| | (b) Pulses & Products | 293 | 304 | 295 | 347 | 315 | 286 | 308 | 310 | 298 | 291 | 302 | 310 |
| | (c) Oils & Fats | 263 | 275 | 247 | 269 | 292 | 260 | 286 | 301 | 276 | 276 | 273 | 258 |
| | (d) Meat, Fish & Eggs | 341 | 369 | 365 | 457 | 336 | 341 | 310 | 346 | 563 | 361 | 385 | 323 |
| | (e) Milk & Products | 343 | 241 | 318 | 313 | 306 | 267 | 251 | 341 | 289 | 257 | 307 | 281 |
| | (f) Condiments & Spices | 248 | 317 | 348 | 408 | 288 | 285 | 278 | 232 | 230 | 285 | 266 | 318 |
| | (g) Vegetables & Fruits | 245 | 310 | 281 | 357 | 291 | 305 | 320 | 324 | 253 | 302 | 276 | 487 |
| | (h) Other Food | 294 | 357 | 337 | 344 | 290 | 304 | 301 | 296 | 318 | 290 | 309 | 343 |
| | **FOOD GROUP** | 304 | 341 | 336 | 352 | 316 | 305 | 310 | 323 | 331 | 315 | 318 | 327 |
| II. | Pan, Supari, Tobacco & Intoxicants | 308 | 350 | 336 | 340 | 387 | 432 | 343 | 472 | 294 | 330 | 352 | 383 |
| III. | Fuel & Light | 305 | 312 | 267 | 451 | 288 | 319 | 342 | 329 | 271 | 304 | 364 | 291 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 255 | 253 | 225 | 373 | 286 | 247 | 331 | 381 | 242 | 292 | 402 | 210 |
| VI. | **MISCELLANEOUS:** | | | | | | | | | | | | |
| | (a) Medical Care | 546 | 466 | 370 | 293 | 282 | 267 | 381 | 319 | 336 | 295 | 394 | 219 |
| | (b) Education, Recreation & Amusement | 341 | 314 | 521 | 206 | 395 | 400 | 313 | 309 | 344 | 412 | 368 | 368 |
| | (c) Transport & Communication | 348 | 391 | 327 | 333 | 595 | 347 | 347 | 560 | 347 | 413 | 388 | 374 |
| | (d) Personal Care & effects | 264 | 275 | 263 | 285 | 300 | 259 | 271 | 295 | 268 | 320 | 255 | 267 |
| | (e) Others | 320 | 345 | 282 | 422 | 290 | 273 | 280 | 281 | 235 | 296 | 402 | 246 |
| | Miscellaneous Group Index | 357 | 332 | 336 | 307 | 345 | 302 | 308 | 310 | 294 | 352 | 350 | 283 |
| | **GENERAL INDEX** | 285 | 302 | 292 | 328 | 291 | 277 | 291 | 306 | 290 | 286 | 312 | 269 |
| | To convert to Base 1960 Multiply by Linking Factor. | 7.39 | 9.19 | 8.27 | ... | 8.26 | 8.56 | 9.25 | 7.92 | 9.31 | 9.05 | ... | ... |

Joint Director,

Directorate of Economics and Statistics,

Bangalore.

**Government of India**

**Ministry of Labour, 'Cleremount' Shimla-171004**

**Labour Bureau**

**No. 112/1(KTK)/2001-FLS**

**CONSUMER PRICE INDEX NUMBERS FOR INDUSTRIAL WORKERS (BASE-1982=100)**

State: Karnataka Month: August, 2004

| Code | Group/Sub-group/ Centre | Bangalore | Belgaum | Hubli Dharwar | Mercara |
|---|---|---|---|---|---|
| | 1 | 2 | 3 | 4 | 5 |
| 1000 | **I. A:FOOD:** | | | | |
| 1100 | (a) Cereals & Products | 439 | 555 | 471 | 454 |
| 1200 | (b) Pulses & Products | 543 | 513 | 547 | 548 |
| 1300 | (c) Oils & Fats | 426 | 396 | 392 | 421 |
| 1400 | (d) Meat, Fish & Eggs | 625 | 569 | 566 | 589 |
| 1500 | (e) Milk & Products | 375 | 530 | 440 | 460 |
| 1600 | (f) Condiments & Spices | 484 | 589 | 564 | 471 |
| 1700 | (g) Vegetables & Fruits | 522 | 482 | 624 | 494 |
| 1800 | (h) Other Food | 709 | 738 | 714 | 784 |
| 1000 | **I- FOOD GROUP** | 514 | 570 | 536 | 534 |
| 2000 | I-Pan, Supari, Tobacco & Intoxicants | 659 | 618 | 590 | 533 |
| 3000 | II-Fuel & Light | 802 | 665 | 561 | 458 |
| 4000 | III-Housing Index | 585 | 717 | 577 | 195 |
| 5000 | IV-Clothing, Bedding & Footwear | 278 | 276 | 325 | 423 |
| 6000 | **V-Miscellaneous:** | | | | |
| 6100 | (a) Medical Care | 486 | 534 | 476 | 507 |
| 6200 | (b) Education, Recreation & Amusement | 422 | 712 | 566 | 635 |
| 6300 | (c) Transport & Communication | 582 | 451 | 576 | 635 |
| 6400 | (d) Personal Care & effects | 492 | 443 | 506 | 461 |
| 6500 | (e) Others | 495 | 564 | 443 | 470 |
| 6600 | Miscellaneous Group | 492 | 530 | 501 | 514 |
| | **GENERAL INDEX** | 508 | 570 | 530 | 497 |

**R.S. NEGI**

Deputy Director.

Joint Director,

Directorate of Economics and Statistics,

Bangalore.

PR-1727

**DIRECTORATE OF ECONOMICS AND STATISTICS, GOVERNMENT OF KARNATAKA, BANGALORE-1**

**Consumer Price Index Numbers for Industrial Workers**

No. DES 24 PWX 2004 Month: September 2004

State: Karnataka Base: 1987-88=100 Date : 27-11-2004

| Group/Sub -Group | | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Mysore | Raichur | Tumkur |
|---|---|---|---|---|---|---|---|---|---|---|---|---|---|
| 1 | | 2 | 3 | 4 | 5 | 6 | 7 | 8 | 9 | 10 | 11 | 12 | 13 |
| I. | **FOOD:** | | | | | | | | | | | | |
| | (a) Cereals & Products | 327 | 379 | 375 | 352 | 350 | 341 | 343 | 340 | 291 | 376 | 341 | 326 |
| | (b) Pulses & Products | 301 | 313 | 293 | 352 | 318 | 290 | 321 | 317 | 301 | 302 | 320 | 311 |
| | (c) Oils & Fats | 258 | 280 | 247 | 271 | 285 | 262 | 289 | 304 | 266 | 277 | 273 | 264 |
| | (d) Meat, Fish & Eggs | 342 | 374 | 365 | 443 | 341 | 342 | 310 | 346 | 530 | 361 | 385 | 335 |
| | (e) Milk & Products | 343 | 252 | 295 | 313 | 306 | 267 | 251 | 342 | 289 | 257 | 307 | 281 |
| | (f) Condiments & Spices | 250 | 332 | 343 | 424 | 306 | 272 | 283 | 231 | 240 | 285 | 264 | 319 |
| | (g) Vegetables & Fruits | 243 | 306 | 264 | 334 | 267 | 246 | 273 | 278 | 221 | 275 | 254 | 513 |
| | (h) Other Food | 306 | 361 | 337 | 347 | 292 | 313 | 310 | 299 | 319 | 293 | 314 | 346 |
| | **FOOD GROUP** | 305 | 339 | 332 | 350 | 318 | 302 | 308 | 321 | 327 | 314 | 319 | 333 |
| II. | Pan, Supari, Tobacco & Intoxicants | 308 | 349 | 334 | 340 | 385 | 435 | 344 | 472 | 294 | 330 | 352 | 378 |
| III. | Fuel & Light | 305 | 312 | 270 | 451 | 288 | 319 | 342 | 329 | 271 | 306 | 364 | 291 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 255 | 253 | 224 | 373 | 286 | 252 | 331 | 381 | 242 | 292 | 404 | 209 |
| VI. | **MISCELLANEOUS:** | | | | | | | | | | | | |
| | (a) Medical Care | 546 | 465 | 370 | 293 | 282 | 267 | 381 | 319 | 336 | 295 | 394 | 219 |
| | (b) Education, Recreation & Amusement | 341 | 314 | 521 | 206 | 376 | 409 | 309 | 309 | 344 | 408 | 375 | 366 |
| | (c) Transport & Communication | 348 | 395 | 327 | 333 | 595 | 347 | 347 | 560 | 420 | 413 | 388 | 374 |
| | (d) Personal Care & effects | 263 | 275 | 263 | 286 | 306 | 259 | 271 | 295 | 269 | 320 | 255 | 267 |
| | (e) Others | 320 | 350 | 282 | 422 | 293 | 273 | 280 | 282 | 235 | 296 | 402 | 246 |
| | Miscellaneous Group Index | 356 | 333 | 336 | 307 | 343 | 305 | 307 | 310 | 311 | 351 | 351 | 283 |
| | **GENERAL INDEX** | 286 | 301 | 290 | 328 | 291 | 277 | 289 | 305 | 290 | 286 | 313 | 271 |
| | To convert to Base 1960 Multiply by Linking Factor. | 7.39 | 9.19 | 8.27 | ... | 8.26 | 8.56 | 9.25 | 7.92 | 9.31 | 9.05 | ... | ... |

Joint Director,

Directorate of Economics and Statistics,
Bangalore.

**Government of India**

**Ministry of Labour, 'Cleremount' Shimla-171004**

**Labour Bureau**

**No. 112/1(KTK)/2001-FLS**

**CONSUMER PRICE INDEX NUMBERS FOR INDUSTRIAL WORKERS (BASE-1982=100)**

State: Karnataka Month: September, 2004

| Code | Group/Sub-group/ Centre | Bangalore | Belgaum | Hubli Dharwar | Mercara |
|---|---|---|---|---|---|
| | 1 | 2 | 3 | 4 | 5 |
| 1000 | **I. A:FOOD:** | | | | |
| 1100 | (a) Cereals & Products | 433 | 555 | 468 | 458 |
| 1200 | (b) Pulses & Products | 553 | 523 | 550 | 563 |
| 1300 | (c) Oils & Fats | 429 | 399 | 404 | 422 |
| 1400 | (d) Meat, Fish & Eggs | 622 | 569 | 567 | 593 |
| 1500 | (e) Milk & Products | 377 | 530 | 440 | 460 |
| 1600 | (f) Condiments & Spices | 489 | 592 | 572 | 468 |
| 1700 | (g) Vegetables & Fruits | 470 | 463 | 651 | 479 |
| 1800 | (h) Other Food | 713 | 740 | 712 | 779 |
| 1000 | **I-A FOOD GROUP** | 509 | 570 | 538 | 534 |
| 2000 | I-Pan, Supari, Tobacco & Intoxicants | 659 | 615 | 585 | 540 |
| 3000 | II-Fuel & Light | 819 | 647 | 561 | 446 |
| 4000 | III-Housing Index | 585 | 717 | 577 | 195 |
| 5000 | IV-Clothing, Bedding & Footwear | 286 | 277 | 328 | 430 |
| 6000 | **V-Miscellaneous:** | | | | |
| 6100 | (a) Medical Care | 485 | 534 | 476 | 507 |
| 6200 | (b) Education, Recreation & Amusement | 422 | 707 | 566 | 635 |
| 6300 | (c) Transport & Communication | 582 | 451 | 576 | 635 |
| 6400 | (d) Personal Care & effects | 494 | 443 | 506 | 462 |
| 6500 | (e) Others | 512 | 564 | 443 | 470 |
| 6600 | Miscellaneous Group | 496 | 530 | 501 | 514 |
| | **GENERAL INDEX** | 508 | 568 | 531 | 497 |

**R.S. NEGI**
Deputy Director.
Joint Director,
Directorate of Economics and Statistics,
Bangalore.

PR-1728

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ:1148:ಡಿಟಿಸಿಆರ್:1998-1999, ದಿನಾಂಕ: 29ನೇ ನವೆಂಬರ್, 2004**

**ಉಪಸ್ಥಿತರು:** ಗೋವಿಂದಪ್ಪ,
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಅಬಕಾರಿ ಉಪ ನಿರೀಕ್ಷಕರು,
ಮಂಗಳೂರು ಉಪ ವಿಭಾಗ, ಮಂಗಳೂರು.

**ವಿರುದ್ಧ**

**ಆರೋಪಿಗಳು:**
1. ಪ್ರಕಾಶ್ ಜೈ (ಪ್ರಾಯ 26 ವರ್ಷ) ಬಿನ್ ಬಿ.ಜೆ. ಜೈ.
ಪಳ್ಳಿಕೆರೆ ಹೌಸ್, ಕರಿಗುನ, ಇಡುಕ್ಕಿ, ಕೇರಳ ರಾಜ್ಯ.
2. ಸಂತೋಷ್ ಅಬ್ರಹಾಂ, ಬಿನ್ ಯು.ಕೆ. ಅಬ್ರಹಾಂ,
ಉರ್ವಿಲ ಹೌಸ್, ಕರಿಗುನ, ಕೇರಳ ರಾಜ್ಯ.

**ಅರ್ಜಿದಾರರು:**
ಶ್ರೀಮತಿ ಸಿ. ರಮಣಿರಾವ್, ಕೋಂ ಚಂದ್ರಶೇಖರ್ ರಾವ್,
ವಿಜಯಶಾಂತಿ ಅಪಾರ್ಟ್‌ಮೆಂಟ್, ಟಿ. ನಗರ, ಚೆನ್ನೈ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:17.04.1999 ರಂದು ಬೆಳಿಗ್ಗೆ 4.30ರ ಸಮಯ ಮಂಗಳೂರು ಉಪ ವಿಭಾಗದ ಅಬಕಾರಿ ಉಪ ನಿರೀಕ್ಷಕರು ತಮ್ಮ ಸಿಬ್ಬಂದಿಯೊಂದಿಗೆ ಮಂಗಳೂರು ಮಹಾನಗರ ಪಾಲಿಕೆಯ ಪಂಪ್‌ವೆಲ್‌ನಿಂದ ಉಳ್ಳಾಲಕ್ಕೆ ಹೋಗುವ ರಾಷ್ಟ್ರೀಯ ಹೆದ್ದಾರಿಯಲ್ಲಿ ಮಹಾಕಾಳಿ ಗುಡಿಯ ಮುಂಭಾಗದಲ್ಲಿ ರಸ್ತೆಗಾವಲು ನಡೆಸುತ್ತಿರುವ ಸಮಯ ಪಂಪ್‌ವೆಲ್ ಕಡೆಯಿಂದ ಉಳ್ಳಾಲದ ಕಡೆಗೆ ಹೋಗುವ ವಾಹನವನ್ನು ತಡೆದು ನಿಲ್ಲಿಸಿ ವಾಹನದಲ್ಲಿ ಇರುವ ಸರಕಿನ ಬಗ್ಗೆ ವಿಚಾರಿಸಲಾಗಿ, ವಾಹನದಲ್ಲಿ ಖಾಲಿ ಕ್ರೇಟ್‌ಗಳು ಇವೆ. ಇವುಗಳನ್ನು ಗೋವಾದಿಂದ ಕೇರಳಕ್ಕೆ ಕೊಂಡೊಯ್ಯುತ್ತಿದ್ದೇವೆ ಎಂದು ತಿಳಿಸಲು, ಸಂಶಯದಿಂದ ಲಾರಿಯನ್ನು ಪಂಚರ ಸಮಕ್ಷಮ ಪರಿಶೀಲನೆ ಮಾಡಲು ಲಾರಿಯು ಅಶೋಕ್ ಲೈಲ್ಯಾಂಡ್ ಕ್ಲೋಸ್ ಬಾಡಿಯ ವಾಹನವಾಗಿದ್ದು, ಅದರ ನೊಂದಣಿ ಸಂಖ್ಯೆ: ಟಿಎನ್-09-ಎಲ್-1786 ಆಗಿದ್ದು ಅದರ ಹಿಂದಿನ ಬಾಗಿಲನ್ನು ತೆರೆದು ನೋಡಲು ಲಾರಿಯಲ್ಲಿ ಕ್ರೇಟ್‌ಗಳು ಕಂಡು ಬಂದು ಲಾರಿಯ ಹೊರಗಿನ ಬಾಡಿ ಎತ್ತರದ ಅಳತೆ ಹೆಚ್ಚಿದ್ದು, ಒಳಗಿನ ಬಾಡಿಯ ಎತ್ತರದ ಅಳತೆ ಕಡಿಮೆಯಿದ್ದು ಅನುಮಾನದ ಮೇರೆಗೆ ಪರಿಶೀಲಿಸಲಾಗಿ, ಲಾರಿ ಬಾಡಿಯ ತಳ ಮಟ್ಟದಲ್ಲಿ ಒಂದು ಮುಚ್ಚಳವಿರುವ ಬಾಯಿ ಇರುವುದು ಕಂಡು ಬಂದಿದ್ದು, ಸದ್ರಿ ಮುಚ್ಚಳವನ್ನು ತೆಗೆದು ನೋಡಲು ಎರಡು ಬಾಯಿಗಳ ಮುಚ್ಚಳಗಳಿದ್ದು, ಅವುಗಳನ್ನು ತೆಗೆಯಲು 2 ಟ್ಯಾಂಕುಗಳು ಇರುವುದು ಕಂಡು ಬಂದಿದ್ದು, ಸದ್ರಿ ಟ್ಯಾಂಕುಗಳಲ್ಲಿ ಮದ್ಯಸಾರವು ಇರುವುದು ಕಂಡು ಬಂತು. ಹಾಜರಿದ್ದ ಚಾಲಕನನ್ನು ವಿಚಾರ ಮಾಡಲು ರಹದಾರಿಯನ್ನು ಕೇಳಲು, ಅವರಲ್ಲಿ ಯಾವುದೇ ರಹದಾರಿ ಇರಲಿಲ್ಲ, ಸದ್ರಿ ಮದ್ಯಸಾರವನ್ನು ಗೋವಾದಿಂದ ಕೇರಳಕ್ಕೆ ಸಾಗಿಸುತ್ತಿರುವುದಾಗಿ ತಿಳಿಸಿರುತ್ತಾರೆ. ರಾಸಾಯನಿಕ ಪರೀಕ್ಷೆಗಾಗಿ ಪ್ರತಿ ಟ್ಯಾಂಕಿನಿಂದ 750 ಮಿಲಿಯ 2 ಬಾಟ್ಲಿಗಳಂತೆ 4 ಬಾಟ್ಲಿಗಳನ್ನು ತೆಗೆದು ಅವುಗಳಿಗೆ ಬಟ್ಟೆದಾರ ಕಟ್ಟಿ ಇಲಾಖೆಯ ಸೀಲ್‌ನಿಂದ ಸೀಲ್ ಮಾಡಿ ಆರೋಪಿಗಳ ಹೆಸರು, ವಿಳಾಸ ಕೇಳಲು ಚಾಲಕನ ಹೆಸರು ಪ್ರಕಾಶ್ ಜೈ, ಬಿನ್: ಬಿ.ಜೆ. ಜೈ (ಪ್ರಾಯ 26 ವರ್ಷ), ಪಳ್ಳಕೆರೆ ಮನೆ, ಕರಿಗುನ್, ವೆಟ್ಟಲೂರ್ ಇಡುಕ್ಕಿ, ಕೇರಳ ರಾಜ್ಯ ಎಂದೂ, ಆತನ ಜೊತೆಯಲ್ಲಿದ್ದ ಆಸಾಮಿ ತನ್ನ ಹೆಸರು ಸಂತೋಷ್ ಅಬ್ರಹಾಂ, ಬಿನ್: ಯು.ಕೆ. ಅಬ್ರಹಾಂ, ಊರು ನೀಲಿಲ್ ಮನೆ, ಕರಿಗುನ್, ಕೇರಳ ರಾಜ್ಯ ಎಂದು ತಿಳಿಸಿರುತ್ತಾರೆ. ಆರೋಪಿಗಳ ಹೆಸರು ಮತ್ತು ವಿಳಾಸವಿರುವ ಗುರುತಿನ ಚೀಟಿಗಳನ್ನು ಮಾದರಿ ಬಾಟಲಿಗಳಿಗೆ ಅಂಟಿಸಲಾಯಿತು. ಸದ್ರಿ ಟ್ಯಾಂಕುಗಳಲ್ಲಿ ತಲಾ 1750 ಲೀಟರ್‌ನಂತೆ 3500 ಲೀಟರ್ ಮದ್ಯಸಾರವು ಇರುವುದು ಕಂಡು ಬಂದಿರುತ್ತದೆ. ಈ ರೀತಿ ಯಾವುದೇ ರಹದಾರಿಯಿಲ್ಲದೆ ಅಕ್ರಮವಾಗಿ ಮದ್ಯಸಾರವನ್ನು ಸಾಗಣೆ ಮಾಡುವುದು ಅಬಕಾರಿ ಕಾಯ್ದೆಯ ಪ್ರಕಾರ ಶಿಕ್ಷಾರ್ಹವಾಗಿದೆಯೆಂದು ಅಪರಾಧಿಗಳನ್ನು ದಸ್ತಗಿರಿ ಮಾಡಿ ಲಾರಿಯನ್ನು, ಮದ್ಯಸಾರವನ್ನು ಸ್ಥಳ ಮಹಜರಿನ ಮೂಲಕ ಸರ್ಕಾರಕ್ಕೆ ವಶಪಡಿಸಿಕೊಂಡು ಮೊಕದ್ದಮೆ ಸಂಖ್ಯೆ: 35/98-99 ದಿನಾಂಕ: 17.04.99ರ ಮೂಲಕ ಪ್ರಕರಣವನ್ನು ದಾಖಲುಪಡಿಸಿ ಮಹಜರು ಮತ್ತು ಪ್ರಥಮ ಮಾಹಿತಿ ವರದಿಯನ್ನು ನ್ಯಾಯಾಲಯಕ್ಕೂ ಹಾಗೂ ಪ್ರಾಧಿಕಾರಕ್ಕೂ ಸಲ್ಲಿಸಿ, ಪ್ರಾಧಿಕಾರದ ಅನುಮತಿಯಂತೆ ಪ್ರಕರಣವನ್ನು ಮುಂದಿನ ನಡವಳಿಕೆಯ ಬಗ್ಗೆ ಅಬಕಾರಿ ಉಪ ನಿರೀಕ್ಷಕರು, ಕಂಕನಾಡಿ ಉಪ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಕೈಗೊಂಡ ಅಬಕಾರಿ ಉಪ ನಿರೀಕ್ಷಕರು ಮದ್ಯಸಾರದ ಮಾದರಿ ಶೀಷೆಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ ರಾಸಾಯನಿಕ ತಜ್ಞರ ವರದಿಯ ಪ್ರಕಾರ ಮದ್ಯಸಾರದ ತೀಕ್ಷ್ಣತೆ 66 ಡಿಗ್ರಿ ಒ.ಪಿ. ಇದ್ದು ಮಾನವ ಸೇವನೆಗೆ ಯೋಗ್ಯವಾಗಿರುವ ಕಾರಣ ಈ ಪ್ರಾಧಿಕಾರವು ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸಾರಾಯಿ ಸಂಸ್ಕರಣಾ ಘಟಕಕ್ಕೆ ಹಂಚಿಕೆ ಮಾಡಿ ಆದೇಶ ನೀಡಿರುತ್ತದೆ.

ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ವಾಹನದ ಮಾಲೀಕರಾದ ಶ್ರೀಮತಿ ರಮಣಿ ರಾವ್, ಕೋಂ: ಶ್ರೀ ಚಂದ್ರಶೇಖರ ರಾವ್ ಇವರಿಂದ ಅಧಿಕಾರ ಪತ್ರ ಹೊಂದಿರುವ ಶ್ರೀ ಶೀಬು ಪೀಟರ್, ಬಿನ್: ಪೀಟರ್ ಇವರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿನಾಂಕ: 21.05.99ರಂದು ಅರ್ಜಿಯನ್ನು ಸಲ್ಲಿಸಿ ವಾಹನದ ಮಧ್ಯಂತರ ಬಿಡುಗಡೆ ಕೋರಿರುತ್ತಾರೆ. ಅರ್ಜಿದಾರರು ಸಲ್ಲಿಸಿದ್ದ ಅರ್ಜಿಯನ್ನು ತಿರಸ್ಕರಿಸಿ ಈ ಪ್ರಾಧಿಕಾರವು ದಿನಾಂಕ: 24.06.99ರಂದು ಆದೇಶ ನೀಡಿರುತ್ತದೆ. ಈ ಪ್ರಾಧಿಕಾರವು ನೀಡಿದ್ದ ಆದೇಶದ ವಿರುದ್ಧ ಅರ್ಜಿದಾರರು 3ನೇ ಹೆಚ್ಚುವರಿ ಸತ್ರ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದ್ದು, ಮಾನ್ಯ ಸತ್ರ ನ್ಯಾಯಾಲಯವು ಜಪ್ತುಪಡಿಸಿದ ವಾಹನವನ್ನು ರೂ.3,00,000/-ಗಳ ಇಂಡೆಮ್ನಿಟಿ ಬಾಂಡ್ ಮತ್ತು ಅದೇ ಮೊತ್ತಕ್ಕೆ ಎರಡು ಜಾಮೀನನ್ನು ಪಡೆದು ಮಧ್ಯಂತರ ಬಿಡುಗಡೆಗೆ ಆದೇಶ ನೀಡಿರುತ್ತದೆ. ಮಾನ್ಯ ಸತ್ರ ನ್ಯಾಯಾಲಯದ ಆದೇಶದನ್ವಯ ದಿನಾಂಕ: 19.08.99ರಂದು ಪ್ರಾಧಿಕಾರವು ವಾಹನವನ್ನು ವಾಹನ ಮಾಲೀಕರಿಗೆ ತಾತ್ಕಾಲಿಕವಾಗಿ ಬಿಡುಗಡೆ ಮಾಡಿರುತ್ತದೆ.

ಈ ಪ್ರಾಧಿಕಾರವು ದಿನಾಂಕ: 09.09.99ರಂದು ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ವಾಹನ ಮಾಲೀಕರಿಗೆ ಕಾರಣ ಕೇಳಿ ನೋಟೀಸು ನೀಡಲಾಗಿದ್ದು, ಸದ್ರಿ ಕಾರಣ ಕೇಳಿ ನೀಡಲಾಗಿದ್ದ ನೋಟೀಸಿಗೆ ವಾಹನ ಮಾಲೀಕರು ದಿನಾಂಕ: 14.09.99ರಂದು ಉತ್ತರ ನೀಡಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನೆ ಪರ ಮೂರು ಇಲಾಖಾ ಸಾಕ್ಷಿಗಳನ್ನು ಹಾಗೂ ಒಂದು ಸ್ವತಂತ್ರ ಸಾಕ್ಷಿಯನ್ನು ವಿಚಾರಣೆಗೊಳಪಡಿಸಿ ಅವರುಗಳ ಹೇಳಿಕೆಯನ್ನು ಪಡೆಯಲಾಗಿರುತ್ತದೆ. ಅರ್ಜಿದಾರರು ಅವರ ಪರ ಯಾವುದೇ ಸಾಕ್ಷಿಯನ್ನು ಹಾಜರುಪಡಿಸಿರುವುದಿಲ್ಲ. ಈ ಪ್ರಕರಣದಲ್ಲಿ ಸರ್ಕಾರದ ಪರವಾಗಿ ಸಲ್ಲಿಸಲಾಗಿರುವ ಸಾಕ್ಷಿ ಆಧಾರದ ಮೇಲೆ ಈ ಕೆಳಗಿನ ವಿವಿಧಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1) ದಿನಾಂಕ: 17.04.99ರಂದು ವಾಹನ ಲಾರಿ ಸಂಖ್ಯೆ: ಟಿಎನ್-09-ಎಲ್-1786ರಲ್ಲಿ ಅಕ್ರಮವಾಗಿ ಮದ್ಯಸಾರವನ್ನು ಸಾಗಣೆ ಮಾಡಲಾಗಿತ್ತೇ?

2) ಅರ್ಜಿದಾರರು ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು, ಮತ್ತು ತನ್ನ ತಿಳುವಳಿಕೆಗೆ ಬಾರದೇ ವಾಹನವನ್ನು ಅಕ್ರಮ ಮದ್ಯಸಾರದ ಸಾಗಾಟಕ್ಕೆ ಉಪಯೋಗಿಸಲಾಗಿತ್ತು ಎಂಬುವುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತುಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ.1:**

ಈ ಪ್ರಕರಣದ ಫಿರ್ಯಾದುದಾರರಾದ ಶ್ರೀ ಬಿ. ಮಾಧವ ಶೆಟ್ಟಿ, ಅಬಕಾರಿ ಉಪ ನಿರೀಕ್ಷಕರು ಮರಣ ಹೊಂದಿರುವ ಪ್ರಯುಕ್ತ ಅವರೊಂದಿಗೆ ಪ್ರಕರಣವನ್ನು ಪತ್ತೆ ಹಚ್ಚಲು ಭಾಗಿಯಾಗಿದ್ದ ಶ್ರೀ ಕೆ.ಬಾಬು, ಅಬಕಾರಿ ರಕ್ಷಕ, ಮಂಗಳೂರು ಉಪ ವಿಭಾಗ ಇವರು ಈ ಪ್ರಾಧಿಕಾರದ ಮುಂದೆ ದಿನಾಂಕ: 22.02.2000ರಂದು ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ಅವರು ದಿನಾಂಕ: 17.04.1999ರಂದು ಪಂಪ್‌ವೆಲ್‌ನಿಂದ ಉಳ್ಳಾಲಕ್ಕೆ ಹೋಗುವ ದಾರಿಯಲ್ಲಿ ಮಹಾಕಾಳಿ ಗುಡಿ ಎಂಬಲ್ಲಿ ಎಡಬದಿಯಲ್ಲಿ ಪಂಪ್‌ವೆಲ್‌ನಿಂದ ಉಳ್ಳಾಲದ ಕಡೆಗೆ ಬರುತ್ತಿದ್ದ ಲಾರಿಯನ್ನು ನಿಲ್ಲಿಸಲು ಸೂಚಿಸಲಾಗಿ, ಲಾರಿಯ ಚಾಲಕನು ಲಾರಿಯನ್ನು ನಿಲ್ಲಿಸಿದನು. ಚಾಲಕನೊಂದಿಗೆ ಇನ್ನೊಬ್ಬ ವ್ಯಕ್ತಿಯು ಲಾರಿಯಲ್ಲಿದ್ದನು. ಲಾರಿಯ ಚಾಲಕನ ಸೀಟಿನಿಂದ ಹಿಂದಕ್ಕೆ ಅಳವಡಿಸಿದ್ದ ಗುಪ್ತ ಟ್ಯಾಂಕನ್ನು ನೋಡಿದೆವು. ಸದ್ರಿ ಟ್ಯಾಂಕಿನಲ್ಲಿ ಸುಮಾರು 3500 ಲೀಟರ್ ಮದ್ಯಸಾರವು ಪತ್ತೆಯಾಗಿದ್ದು, ಈ ಬಗ್ಗೆ ದಾಖಲಾತಿಗಳನ್ನು ವಿಚಾರ ಮಾಡಲು ಚಾಲಕನು ಆತನ ಹತ್ತಿರ ಯಾವುದೇ ದಾಖಲಾತಿಗಳು ಇಲ್ಲವೆಂದು ತಿಳಿಸಿದನೆಂದು ತಿಳಿಸಿರುತ್ತಾರೆ. ರಾಸಾಯನಿಕ ಪರೀಕ್ಷೆಗಾಗಿ 750 ಮಿಲಿಯ 4 ಬಾಟಲುಗಳಲ್ಲಿ ತೆಗೆದು, ಬಾಟಲುಗಳಿಗೆ ಬಟ್ಟೆದಾರ ಕಟ್ಟಿ ಇಲಾಖೆಯ ಸೀಲ್‌ನಿಂದ ಸೀಲು ಮಾಡಿರುವುದಾಗಿ, ಪಂಚರುಗಳಿಗೆ ಪ್ರಯತ್ನಿಸಿ ಯಾವುದೇ ಪಂಚರು ಸ್ಥಳದಲ್ಲಿ ದೊರೆಯಲಿಲ್ಲವೆಂದು, ನಂತರ ಸ್ಥಳ ಮಹಜರನ್ನು ತಯಾರಿಸಿ ಲಾರಿಯನ್ನು ಹಾಗೂ ಮದ್ಯಸಾರವನ್ನು ಸರ್ಕಾರಕ್ಕೆ ವಶಪಡಿಸಿಕೊಂಡಿರುವುದಾಗಿ, ತಾನು ಸ್ಥಳ ಮಹಜರಿಗೆ ಸಹಿ ಮಾಡಿರುವುದಾಗಿ ಸದ್ರಿ ಮಹಜರನ್ನು ನಿಶಾನೆ ಪಿ-1 ಎಂದೂ, ಮತ್ತು ತನ್ನ ಸಹಿಯನ್ನು ನಿಶಾನೆ ಪಿ-1ಎ ಎಂದು ಅಬಕಾರಿ ಉಪ ನಿರೀಕ್ಷಕರ ಸಹಿಯನ್ನು ನೋಡಿ ಅದನ್ನು ನಿಶಾನೆ ಪಿ-1ಬಿ ಎಂದು ಗುರುತಿಸಲಾಗಿದೆ. ನಂತರ ನಾವುಗಳು ವಾಹನ ಮತ್ತು ಮದ್ಯಸಾರದೊಂದಿಗೆ ಕಛೇರಿಗೆ ಹಿಂತಿರುಗಿರುವುದಾಗಿ, ನಂತರ ಶ್ರೀ ಮಾಧವ ಶೆಟ್ಟಿ, ಅಬಕಾರಿ ಉಪ ನಿರೀಕ್ಷಕರು ಪ್ರಕರಣವನ್ನು ಸಂಖ್ಯೆ: 35/98-99 ದಿನಾಂಕ: 17.04.99ರ ಮೂಲಕ ದಾಖಲುಪಡಿಸಿರುತ್ತಾರೆಂದು ತಿಳಿಸಿರುತ್ತಾರೆ. ತಾನು ಲಾರಿಯನ್ನು ಗುರುತಿಸಬಲ್ಲೆ ಎಂದು, ಅದು ಎಂ.ಓ. -1 ಎಂದು ಗುರುತಿಸಲಾಗಿರುತ್ತದೆ.

ಅರ್ಜಿದಾರರ ಪರ ವಕೀಲರದ ಪಾಟೀ ಸವಾಲಿಗೆ ಉತ್ತರಿಸುತ್ತಾ ಈ ಪ್ರಕರಣದ ಮಹಜರನ್ನು ಅಬಕಾರಿ ಉಪ ನಿರೀಕ್ಷಕರು ಬರೆದಿರುವುದಾಗಿ, ಅದರಲ್ಲಿ ಏನು ಬರೆದಿದೆಯೆಂದು ನನಗೆ ಜ್ಞಾಪಕ ಇಲ್ಲವೆಂದು, ತಕ್ಷೀರು ಸ್ಥಳದಲ್ಲಿ ವಾಹನಗಳು ಓಡಾಡುತ್ತವೆ ಎಂದು, ಸದ್ರಿ ಸ್ಥಳದ 50 ಮೀಟರು ಫಾಸಲೆಯಲ್ಲಿ ಮನೆಗಳು ಇದೆಯೆಂದು, ತಾವು ವಾಹನ ತಪಾಸಣೆಯನ್ನು ಬೆಳಗಿನ ಜಾವ 3.30 ರಿಂದ ಮಾಡಿದ್ದೇವೆ ಎಂದು ತಿಳಿಸಿರುತ್ತಾರೆ. ಆ ದಿನದಂದು ಇಲಾಖೆಯ ವಾಹನದಲ್ಲಿ ಹೋಗಿದ್ದಾಗಿ, ಹೋದ ಎಲ್ಲರ ಹೆಸರುಗಳನ್ನು ಮಹಜರಿನಲ್ಲಿ ನಮೂದಿಸಿರುವುದಿಲ್ಲವೆಂದು ಹೇಳಿರುತ್ತಾರೆ. ಸ್ಥಳದಲ್ಲಿ ಸರ್ಚ್ ಲಿಸ್ಟನ್ನು ತಯಾರಿಸಿದ ಬಗ್ಗೆ ಜ್ಞಾಪಕ ಇಲ್ಲವೆಂದು, ಸ್ವತಂತ್ರ ಸಾಕ್ಷಿ ಸದಾಶಿವ ಶೆಟ್ಟಿ ಇವರು ಮಹಜರಿಗೆ ಸಹಿ ಮಾಡಿದ್ದಾರೆಯೇ ಎಂಬುದು ನನಗೆ ಜ್ಞಾಪಕವಾಗುತ್ತಿಲ್ಲವೆಂದು, ಲಾರಿಯಲ್ಲಿ ಮೀನನ್ನು ಸಾಗಣೆ ಮಾಡುತ್ತಿದ್ದರು ಎಂದರೆ ಸರಿಯಲ್ಲ. ಲಾರಿಯಲ್ಲಿದ್ದ ಮದ್ಯಸಾರದ ಪ್ರಮಾಣವನ್ನು ಅಂದಾಜಿನ ಮೇಲೆ ನಿಗದಿಪಡಿಸಿರುವುದಾಗಿ ಮತ್ತು ಲಾರಿಯಲ್ಲಿ ಮದ್ಯಸಾರವನ್ನು ಸಾಗಿಸುತ್ತಿರಲಿಲ್ಲ ಎಂದರೆ ಸರಿಯಲ್ಲ ಎಂದು ಸಾಕ್ಷಿ ನೀಡಿರುತ್ತಾರೆ.

**ಪ್ರಾ.ಸಾ.2**

ಶ್ರೀ ಬಾಲಕೃಷ್ಣ ನಿವೃತ್ತ ಅಬಕಾರಿ ಉಪ ನಿರೀಕ್ಷಕರು ಈ ಪ್ರಕರಣದ ತನಿಖಾಧಿಕಾರಿಯಾಗಿದ್ದು, ಅವರು ದಿನಾಂಕ: 02.03.2000ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ತಾವು ದಿನಾಂಕ: 17.04.1999ರಂದು ಈ ಪ್ರಕರಣಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಹಾಗೂ ಸ್ವತ್ತುಗಳನ್ನು ಪಡೆದಿದ್ದು, ಮದ್ಯಸಾರದ ಮಾದರಿ ಶೀಷೆಯನ್ನು ದಿನಾಂಕ: 20.04.99ರಂದು ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಿ ರಾಸಾಯನಿಕ ತಜ್ಞರ ವರದಿಯನ್ನು ದಿನಾಂಕ: 21.04.99ರಂದು ಪಡೆದಿರುವುದಾಗಿ, ರಾಸಾಯನಿಕ ತಜ್ಞರ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-3 ಎಂದು ಗುರುತಿಸಲಾಗಿದೆ. ಪ್ರಕರಣದ ಮುಂದಿನ ತನಿಖೆಯನ್ನು ಅಬಕಾರಿ ನಿರೀಕ್ಷಕರು, ಉಳ್ಳಾಲ ವಲಯ ಇವರಿಗೆ ವಹಿಸಿಕೊಟ್ಟಿರುವುದಾಗಿ ತಿಳಿಸಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಈ ಕೇಸಿನಲ್ಲಿ ಜಪ್ತು ಪಡಿಸಿರುವ ಮುದ್ದೆಮಾಲು ಈ ಕೇಸಿಗೆ ಸಂಬಂಧಪಟ್ಟಿದ್ದಲ್ಲವೆಂದರೆ ಸರಿಯಲ್ಲ. ಈ ಕೇಸಿನಲ್ಲಿ ನನಗೆ ಕೇವಲ ಒಂದೇ ಬಾಟಲಿಯನ್ನು ಹಸ್ತಾಂತರಿಸಿರುತ್ತಾರೆ. ಸದ್ರಿ ಬಾಟಲಿಯಲ್ಲಿ 750 ಮಿಲಿ ಮದ್ಯಸಾರ ಇತ್ತು. ಮಾದರಿ ಶೀಷೆಯ ಮೇಲೆ ಪಂಚಾಯತುದಾರರ ಸಹಿಯನ್ನು ಪಡೆದುಕೊಂಡಿರುವ ಬಗ್ಗೆ ಹೇಳಲು ಬರುವುದಿಲ್ಲ ಎಂದು ತಿಳಿಸಿರುತ್ತಾರೆ.

**ಪ್ರಾ.ಸಾ.3**

ಶ್ರೀ ಯಶವಂತ ಕುಮಾರ್, ನಿವೃತ್ತ ಅಬಕಾರಿ ನಿರೀಕ್ಷಕರು ಈ ಪ್ರಾಧಿಕಾರದ ಮುಂದೆ ದಿನಾಂಕ: 02.03.2000ರಂದು ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ಅವರು ದಿನಾಂಕ: 29.09.1999 ರಂದು ಪ್ರಕರಣವನ್ನು ತನಿಖೆಗೆ ವಹಿಸಿಕೊಂಡು ದಿನಾಂಕ: 12.10.99ರಂದು ತನಿಖೆ ಮುಗಿಸಿ ಅಂತಿಮ ಆರೋಪ ಪಟ್ಟಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿರುವುದಾಗಿ, ಆರೋಪಿ 1 ಮತ್ತು 2 ವಾಹನದಲ್ಲಿದ್ದವರು ಹಾಗೂ 3ನೇ ಆರೋಪಿ ವಾಹನದ ಮಾಲೀಕರು ಎಂದು ತಿಳಿಸಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ವಾಹನ ಮಾಲೀಕರನ್ನು ಅಂತಿಮ ಆರೋಪಣಾ ಪಟ್ಟಿಯಲ್ಲಿ ಸೇರಿಸಿರುವುದು ಅವರು ವಾಹನದ ನೊಂದಣೆ ಮಾಲೀಕರಾದ ಕಾರಣದಿಂದಾಗಿ ಎಂದು ತಿಳಿಸಿರುತ್ತಾರೆ. ವಾಹನ ಮಾಲೀಕರು ಈ ಅಕ್ರಮ ಸಾಗಾಟದಲ್ಲಿ ಭಾಗಿಯಾಗಿದ್ದಾರೆಂದು ಹೇಳಲು ನನ್ನ ತನಿಖಾ ವರದಿಯಲ್ಲಿ ಯಾವುದೇ ಸಾಕ್ಷ್ಯಾಧಾರಗಳು ಇಲ್ಲವೆಂದು, ನ್ಯಾಯಾಲಯಕ್ಕೆ ಸುಳ್ಳು ಅಂತಿಮ ವರದಿಯನ್ನು ಸಲ್ಲಿಸುತ್ತಿದ್ದೇನೆಂದರೆ ಸರಿಯಲ್ಲವೆಂದು ತಿಳಿಸಿರುತ್ತಾರೆ.

ಪ್ರಾ.ಸಾ.4

ಶ್ರೀ ಸದಾಶಿವ ಶೆಟ್ಟಿ ಸ್ವತಂತ್ರ ಸಾಕ್ಷಿದಾರರಾಗಿ ದಿನಾಂಕ: 02.03.2000ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತನ್ನ ಸಾಕ್ಷಿ ನುಡಿದಿರುತ್ತಾರೆ. ಅವರು ಈ ಕೇಸಿನಲ್ಲಿ ಅಬಕಾರಿ ಅಧಿಕಾರಿಗಳು ಪಂಚನಾಮೆ ಮಾಡಲು ಕರೆಸಿರುವುದಿಲ್ಲ. ಈ ಪ್ರಕರಣದಲ್ಲಿ ಪಂಪ್‌ವೆಲ್ ಹತ್ತಿರ ಸ್ಪಿರಿಟ್ ತುಂಬಿದ ಲಾರಿಯ ವಿಷಯ ಪಂಚನಾಮೆ ಮಾಡಿರುವುದು ಗೊತ್ತಿರುವುದಿಲ್ಲ. ನಾನು ಪಂಚನಾಮೆಯನ್ನು ನೋಡಿದೆನು. ಅದನ್ನು ನಿಶಾನೆ ಪಿ-1 ಮತ್ತು ನನ್ನ ಸಹಿ ನಿಶಾನೆ ಪಿ-1ಬಿ. ಈ ಸಹಿಯನ್ನು ಅಬಕಾರಿ ಇ.ಐ.ಬಿ. ಆಫೀಸಿನಲ್ಲಿ ಮಾಡಿರುತ್ತೇನೆ. ನಾನು ಸಹಿ ಮಾಡುವಾಗ ಖಾಲಿ ಹಾಳೆಯಿತ್ತು ಎಂದು ಹೇಳುವಾಗ ಮಾನ್ಯ ಎ.ಡಿ.ಪಿ. ಯವರು ಸದ್ರಿ ಸಾಕ್ಷಿಯನ್ನು ಪ್ರತಿಕೂಲ ಸಾಕ್ಷಿ ಎಂದು ಪರಿಗಣಿಸಿ ಪಾಟೀ ಸವಾಲು ಮಾಡಲು ಅನುಮತಿಯನ್ನು ಕೋರಿ ಸಾಕ್ಷಿ ವಿಚಾರಣೆಯನ್ನು ಮುಂದುವರಿಸಲು, ಸಾಕ್ಷಿಯು ದಿನಾಂಕ: 17.04.1999 ರಂದು ಸಂಜೆ 4.30ರ ಸಮಯ ಅಬಕಾರಿ ಅಧಿಕಾರಿಗಳು ತನ್ನನ್ನು ರಾಷ್ಟ್ರೀಯ ಹೆದ್ದಾರಿ ಮಹಾಕಾಳಿ ಗುಡಿಯ ಬಳಿ ಕರೆಸಿದ್ದರು. ಅಲ್ಲಿ ಲಾರಿ ಸಂಖ್ಯೆ: ಟಿಎನ್-09-ಎಲ್-1786 ಇತ್ತು. ಅದು ಟ್ಯಾಂಕರ್ ಲಾರಿಯಾಗಿತ್ತು. ಟ್ಯಾಂಕರ್‌ನಲ್ಲಿ 3500 ಲೀಟರ್ ಮದ್ಯಸಾರವಿದ್ದು, ಚಾಲಕ ಮತ್ತು ಇನ್ನೊಬ್ಬನನ್ನು ವಿಚಾರ ಮಾಡಲು ಅವರಲ್ಲಿ ರಹದಾರಿ ಇರಲಿಲ್ಲ. ರಾಸಾಯನಿಕ ಪರೀಕ್ಷೆಗಾಗಿ 750 ಮಿಲಿಯನ್ನು ತೆಗೆದರು. ಪಂಚನಾಮೆ ತಯಾರು ಮಾಡಿದರು. ನನ್ನ ಸಮಕ್ಷಮ ಜಪ್ತುಗೊಳಿಸಿದರು. ನಾನು ಸ್ಥಳದಲ್ಲಿಯೇ ಪಂಚನಾಮೆಗೆ ಸಹಿ ಮಾಡಿರುತ್ತೇನೆ ಎಂದರೆ ಸರಿಯಲ್ಲವೆಂದು ಉತ್ತರಿಸಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ತಾನು ಎ.ಜೆ. ಶೆಟ್ಟಿ ಕಂಪೆನಿಯಲ್ಲಿ ಕ್ಯಾಷಿಯರ್ ಆಗಿ ಕೆಲಸ ಮಾಡುತ್ತಿದ್ದೇನೆ. ನಮ್ಮ ಕಂಪೆನಿ ಮದ್ಯಸಾರ ಹಾಗೂ ಐ.ಎಂ.ಎಲ್. ವ್ಯವಹಾರ ಮಾಡುತ್ತದೆ. ನಾನು ಯಾವಾಗಲೂ ಅಬಕಾರಿ ಕಛೇರಿಗೆ ಹೋಗುತ್ತಿರುತ್ತೇನೆ. ಹಾಗೆ ಹೋಗುವಾಗ ಖಾಲಿ ಕಾಗದದಲ್ಲಿ ತನ್ನ ರುಜುವನ್ನು ಪಡೆದುಕೊಂಡಿರುತ್ತಾರೆ. ಮಹಜರಿನಲ್ಲಿ ಏನು ಬರೆದಿರುತ್ತಾರೆ ಎಂಬ ಮಾಹಿತಿಯಿಲ್ಲವೆಂದು ಪುನಃ ಪ್ರತಿಕೂಲವಾಗಿ ಸಾಕ್ಷಿಯನ್ನು ನೀಡಿರುತ್ತಾನೆ.

ಈ ಪ್ರಕರಣದಲ್ಲಿ ಸ್ವತಂತ್ರ ಸಾಕ್ಷಿದಾರರು ಪ್ರತಿಕೂಲ ಸಾಕ್ಷ್ಯ ನೀಡಿದ್ದರೂ ಸಹಾ ತನಿಖಾಧಿಕಾರಿ ತೃಪ್ತಿಕರ ಸಾಕ್ಷಿ ನೀಡಿದರೆ ಅವರ ಸಾಕ್ಷ್ಯವನ್ನು ನಂಬಬಹುದಾಗಿದೆ. ಈ ಪ್ರಕರಣದಲ್ಲಿ ಅಕ್ರಮ ಅಪರಾಧದಲ್ಲಿ ವಾಹನವನ್ನು ಜಪ್ತು ಮಾಡಲಾಗಿದೆ ಎಂದು ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ಮನವರಿಕೆಯಾದರೆ ಕಾನೂನು ಪ್ರಕಾರ ಸಾಕಾಗಬಹುದೇ ಹೊರತು ಸಂಗತಿಯನ್ನು ಸಂಶಯಾತೀತವಾಗಿ ರುಜುವಾತು ಪಡಿಸುವ ಅಗತ್ಯವಿರುವುದಿಲ್ಲ. ಈ ಬಗ್ಗೆ ಐ.ಎಲ್.ಆರ್. 1978 ಸುಪ್ರೀಂ ಕೋರ್ಟ್ ಪುಟ ಸಂಖ್ಯೆ: 151ರಲ್ಲಿ ಈ ಕೆಳಗಿನಂತೆ ವ್ಯಾಖ್ಯಾನಿಸಿರುತ್ತದೆ.

"If the evidence of the investigating officer who recovered the material object is concerning the evidence as to recovery need not be rejected on the ground that the seizure witness do not support the prosecution version".

ಆದುದರಿಂದ ಈ ಮೇಲಿನ ಸಾಕ್ಷ್ಯಾಧಾರಗಳನ್ನು ಮತ್ತು ಗುರುತಿಸಲಾಗಿರುವ ದಾಖಲೆಗಳನ್ನು ಪರಿಶೀಲಿಸಿ ಅಲ್ಲದೆ, ಜಪ್ತುಪಡಿಸಲಾಗಿರುವ ವಾಹನ ಲಾರಿಯಲ್ಲಿ ಗುಪ್ತವಾಗಿ ಟ್ಯಾಂಕನ್ನು ನಿರ್ಮಿಸಿ ಅದರಲ್ಲಿ ಮದ್ಯಸಾರವನ್ನು ಸಾಗಣೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ ಎಂಬ ಅಭಿಪ್ರಾಯದಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಪ್ರಕರಣದಲ್ಲಿ ತನ್ನ ತಿಳುವಳಿಕೆಗೆ ಬಾರದೇ ಈ ಅಕ್ರಮ ಮದ್ಯಸಾರ ಸಾಗಾಣಿಕೆ ನಡೆದಿದೆ ಎಂಬುದನ್ನು ಸಾಬೀತುಪಡಿಸುವುದು ವಾಹನ ಮಾಲೀಕರ ಜವಾಬ್ದಾರಿಯಾಗಿರುತ್ತದೆ. ಆದರೆ ಈ ಪ್ರಕರಣದಲ್ಲಿ ವಾಹನ ಮಾಲೀಕರಿಗೆ ಹಲವಾರು ಬಾರಿ ನೋಟೀಸು ನೀಡಿದ್ದರೂ, ಈ ಪ್ರಾಧಿಕಾರದ ಮುಂದೆ ಹಾಜರಾಗಿ ಈ ಕೃತ್ಯವು ತನ್ನ ತಿಳುವಳಿಕೆಗೆ ಬಾರದೇ ನಡೆದಿದೆಯೆಂದು ರುಜುವಾತು ಪಡಿಸಲು ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿರುವುದಿಲ್ಲ. ಅಲ್ಲದೆ ಸದ್ರಿ ವಾಹನದಲ್ಲಿ ಕಳ್ಳ ಸಾಗಣೆ ಮಾಡುವ ಉದ್ದೇಶದಿಂದಲೇ ವಾಹನದ ತಳಭಾಗದಲ್ಲಿ 3500 ಲೀಟರ್ ಸಾಮರ್ಥ್ಯದ ಗೋಪ್ಯವಾದ ಟ್ಯಾಂಕುಗಳನ್ನು ನಿರ್ಮಿಸಲಾಗಿದ್ದು, ಈ ಪ್ರಮಾಣದ ಟ್ಯಾಂಕ್ ಅಳವಡಿಕೆ ವಾಹನ ಮಾಲೀಕರ ತಿಳುವಳಿಕೆಯಿಲ್ಲದೆ ಆಗಿರುವುದು ಸಾಧ್ಯವಿಲ್ಲ. ವಾಹನ ಮಾಲೀಕರು ಈ ರೀತಿಯ ಗೋಪ್ಯವಾದ ಟ್ಯಾಂಕನ್ನು ತಾವೇ ನಿರ್ಮಿಸಿ ವಾಹನವನ್ನು ತಮ್ಮ ತಿಳುವಳಿಕೆಯಿಂದಲೇ ಅಕ್ರಮ ಮದ್ಯಸಾರವನ್ನು ಸಾಗಣೆ ಮಾಡಲು ಅಣಿ ಮಾಡಿಕೊಟ್ಟಿರುವುದು ಸ್ಪಷ್ಟವಾಗಿರುತ್ತದೆ. ಈ ಕಾರಣದಿಂದ ವಾಹನ ಮಾಲೀಕರು ಈ ಅಕ್ರಮ ಸಾಗಣೆಯನ್ನು ತಡೆಯಲು ಯಾವುದೇ ಮುಂಜಾಗ್ರತೆ ಕ್ರಮ ತೆಗೆದುಕೊಂಡಿರುವುದು ಕಂಡು ಬರುವುದಿಲ್ಲ. ಈ ಕೃತ್ಯವನ್ನು ತಾವೇ ನಿರ್ಮಿಸಿದ ಗೋಪ್ಯ ಟ್ಯಾಮಿನಲ್ಲಿ ತನ್ನ ತಿಳುವಳಿಕೆಯಿಂದಲೇ ನಡೆಯುವಂತೆ ಅನುವು ಮಾಡಿಕೊಟ್ಟಿರುವುದು ನಿಸ್ಸಂಶಯವಾಗಿ ಸಾಬೀತಾಗಿರುತ್ತದೆ. ಈ ಕಾರಣದಿಂದ ಈ ಪ್ರಕರಣದ ಎರಡನೇ ಪರಿಶೀಲನಾಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿರುತ್ತೇನೆ.

ಈ ಪ್ರಕರಣದಲ್ಲಿ 1965ನೇ ಅಬಕಾರಿ ಕಾಯ್ದೆ ಕಲಂ 54ರ ಅಡಿಯಲ್ಲಿ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆದಿರುವುದಿಲ್ಲ ಹಾಗೂ ಸರ್ಚ್ ವಾರೆಂಟನ್ನು ಪಡೆಯದಿರುವುದಕ್ಕೆ ಕಾರಣಗಳನ್ನು ನಮೂದಿಸಿ ಸರ್ಚ್ ಮೆಮೋ ತಯಾರಿಸಿರುವುದಿಲ್ಲ. ಈ ಕ್ರಮವನ್ನು ಕೈಗೊಳ್ಳದೇ ಇರುವ ಕಾರಣಕ್ಕೆ ಅಬಕಾರಿ ವಸ್ತುಗಳನ್ನು ವಶಪಡಿಸಿಕೊಂಡಿರುವುದು ಕಾನೂನು ಬಾಹಿರವಾಗುವುದಿಲ್ಲ. ಈ ಬಗ್ಗೆ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಪನ್ನು ಉಲ್ಲೇಖಿಸಬಹುದಾಗಿದೆ. ಐ.ಎಲ್.ಆರ್. 2004 ಕರ್ನಾಟಕ 527ರಲ್ಲಿ ವರದಿಯಾಗಿರುವ ಪ್ರಕರಣ ಸೋಮನಾಥ ಕೆರೆಬೈಲ್ ವಿರುದ್ಧ ಸರ್ಕಾರ ಅಬಕಾರಿ ಉಪ ಆಯುಕ್ತರು, ಬೆಳಗಾಂ ಜಿಲ್ಲೆ ಈ ಪ್ರಕರಣದಲ್ಲಿ ನ್ಯಾಯಾಲಯವು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ, ಅಬಕಾರಿ ಕಾಯ್ದೆ ಕಲಂ 54ರ ಅಡಿಯಲ್ಲಿ ಅನುಸರಿಸಬೇಕಾದ ಪ್ರಕ್ರಿಯೆಯನ್ನು ಅನುಸರಿಸಲು ತಪ್ಪಿದರೆ, ಕರ್ನಾಟಕ ಅಬಕಾರಿ ಕಾಯ್ದೆಯನ್ನು ಅನುಸರಿಸದ ಕಾರಣಕ್ಕಾಗಿ ಜಪ್ತುಗೊಳಿಸಿದ ಯಾವುದೇ ಅಬಕಾರಿ ವಸ್ತುಗಳು ಕಾನೂನು ಬಾಹಿರವಾಗುವುದಿಲ್ಲ ಎಂಬುವುದನ್ನು ಸ್ಪಷ್ಟವಾಗಿ ವ್ಯಕ್ತಪಡಿಸುತ್ತದೆ. ಈ ಅಭಿಪ್ರಾಯದಂತೆ ಪ್ರಸ್ತುತ ಪ್ರಕರಣದಲ್ಲಿ ಅಬಕಾರಿ ಕಾಯ್ದೆ ಕಲಂ 54ರ ಅನುಸರಣೆ ಮಾಡದೇ ಇದ್ದರೂ ಜಪ್ತುಗೊಳಿಸಲಾಗಿರುವ ವಾಹನದಲ್ಲಿ ಅಕ್ರಮ ಮದ್ಯ ಸಾಗಣೆಯಾಗಿರುವುದನ್ನು ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಗಳು ರುಜುವಾತು ಪಡಿಸಿದಲ್ಲಿ ಜಪ್ತುಗೊಳಿಸಿರುವ ವಾಹನ ಕಾನೂನು ಬಾಹಿರವಾಗುವುದಿಲ್ಲ ಹಾಗೂ ಮುಟ್ಟುಗೋಲು ಪ್ರಕರಣಕ್ಕೆ ಯಾವುದೇ ರೀತಿಯ ದುಷ್ಪರಿಣಾಮ ಉಂಟಾಗುವುದಿಲ್ಲ.

ಈ ಎಲ್ಲಾ ಕಾರಣಗಳಿಂದ ಹಾಗೂ ಪುರಾವೆಗಳಿಂದ ವಾಹನದಲ್ಲಿ ಕಳ್ಳ ಸಾಗಣೆ ಮಾಡಲೆಂದೇ ಗುಪ್ತ ಟ್ಯಾಂಕನ್ನು ನಿರ್ಮಿಸಿ ಅಕ್ರಮ ಸಾಗಾಟ ಮಾಡಿರುವುದು ಸಾಬೀತಾಗಿರುವುದರಿಂದ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ: 1148: ಡಿಟಿಸಿಆರ್: 1998-1999, ದಿನಾಂಕ: 29ನೇ ನವೆಂಬರ್, 2004**

ಗೋವಿಂದಪ್ಪ, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43(ಎ)ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ

ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪ ವಿಭಾಗ, ಮಂಗಳೂರು ಇವರ ಮೊಕದ್ದಮೆ ಸಂಖ್ಯೆ: 35/98-99 ದಿನಾಂಕ: 17.04.1999 ರಲ್ಲಿ ವಶಪಡಿಸಿಕೊಂಡಿರುವ ವಾಹನ ಲಾರಿ ಸಂಖ್ಯೆ: ಟಿಎನ್-09-ಎಲ್- 1786ನ್ನು ನಿಯಮ 43ಎ (2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 29.11.2004ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.1 - ಶ್ರೀ ಕೆ. ಬಾಬು, ಅಬಕಾರಿ ರಕ್ಷಕರು, ಮಂಗಳೂರು ಉಪವಿಭಾಗ, ಮಂಗಳೂರು.
ಪ್ರಾ.ಸಾ.2 - ಶ್ರೀ ಬಾಲಕೃಷ್ಣ, ನಿವೃತ್ತ ಅಬಕಾರಿ ಉಪ ನಿರೀಕ್ಷಕರು.
ಪ್ರಾ.ಸಾ.3- ಶ್ರೀ ಯಶವಂತ ಕುಮಾರ್, ನಿವೃತ್ತ ಅಬಕಾರಿ ನಿರೀಕ್ಷಕರು, ಉಳ್ಳಾಲ ವಲಯ.
ಪ್ರಾ.ಸಾ.4 - ಶ್ರೀ ಸದಾಶಿಶೆಟ್ಟಿ, ಬಿನ್: ಶೀನ ಶೆಟ್ಟಿ, ಸ್ವತಂತ್ರ ಸಾಕ್ಷಿದಾರರು.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ಮಹಜರಿನ ಛಾಯ ಪ್ರತಿ.
ನಿಶಾನೆ ಪಿ-1ಎ - ಶ್ರೀ ಕೆ. ಬಾಬು ರವರು ಮಹಜರಿನ ಛಾಯ ಪ್ರತಿಯಲ್ಲಿ ಮಾಡಿದ ಸಹಿ.
ನಿಶಾನೆ ಪಿ-3 - ರಾಸಾಯನಿಕ ವಿಶ್ಲೇಷಕರ ವರದಿಯ ಛಾಯ ಪ್ರತಿ.

**ಅನುಬಂಧ-3**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

**ಅರ್ಜಿದಾರರ ಹೇಳಿಕೆ:** - ಯಾವುದೂ ಇಲ್ಲ-

**ಅನುಬಂಧ-4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು: -ಯಾವುದೂ ಇಲ್ಲ-.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 1729

**ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ಕಛೇರಿ**

**ಕ್ರಮಾಂಕ: ಡಿಆರ್‌ಬಿ-1:ಸಮಾಪನೆ:24:2003-04, ದಿನಾಂಕ: 30ನೇ ಅಕ್ಟೋಬರ್, 2004**

**ವಿಷಯ :** ಹೆಚ್.ಎಂ.ಟಿ. ಸಹಕಾರ ಸಂಘ ನಿ., ಹೆಚ್‌ಎಂಟಿ ಅಂಚೆ, ಬೆಂಗಳೂರು-31 ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ-

**ಉಲ್ಲೇಖ :**
1. ಸಂಘದ ಪತ್ರ ದಿನಾಂಕ: 28.10.2003.
2. ಸ.ಸಂ. ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ ಇವರ ಪತ್ರ ಸಂಖ್ಯೆ: ಜೆಆರ್‌ಬಿ/ ಎಲ್‌ಕ್ಯೂಡಿ/36/ಎಲ್‌ಎಂಸಿ/ 2003-04, ದಿನಾಂಕ:19.01.2004.
3. ಇದೇ ಕಛೇರಿ ಪತ್ರ ಸಮಸಂಖ್ಯೆ ದಿನಾಂಕ: 28.01.2004.
4. ಸ.ಸಂ. ಸಹಾಯಕ ನಿಬಂಧಕರು, ಒಂದನೇ ವಲಯ, ಇವರ ಪತ್ರ ಸಂ:ಸನಿ-44/ ಸಮಾಪನೆ/8/2004-05 ದಿನಾಂಕ:30.08.2004.

**ಪ್ರಸ್ತಾವನೆ:**

ಹೆಚ್.ಎಂ.ಟಿ. ಸಹಕಾರ ಸಂಘ ನಿ., ಹೆಚ್.ಎಂ.ಟಿ. ಅಂಚೆ, ಬೆಂಗಳೂರು-31 ಈ ಸಂಘವು ಸ್ಥಗಿತಗೊಂಡ ಕಾರಣ ಸಂಘದ ದಿನಾಂಕ:30.10.2002ರಂದು ನಡೆದ ಸರ್ವಸದಸ್ಯರ ಸಭೆ ಠರಾವು ಸಂಖ್ಯೆ 11ರಲ್ಲಿ ಈ ಸಂಘವನ್ನು ಸಮಾಪನೆಗೊಳಿಸುವಂತೆ ಸಭೆಯು ಸರ್ವಾನುಮತದಿಂದ ತೀರ್ಮಾನಿಸಿರುತ್ತದೆ. ಈ ತೀರ್ಮಾನದ ಆಧಾರದ ಮೇಲೆ ಸಂಘದ ಆಡಳಿತ ಮಂಡಳಿಯು ದಿನಾಂಕ: 27.09.2003ರಂದು ಸಭೆ ನಡೆಸಿ ಮಹಾಸಭೆ ತೀರ್ಮಾನದಂತೆ ಈ ಸಂಘವನ್ನು ಸಮಾಪನೆಗೊಳಿಸಲು ಇಲಾಖೆಯನ್ನು ಕೋರುವಂತೆ ತೀರ್ಮಾನಿಸಿರುತ್ತದೆ. ಅದರಂತೆ ಸಂಘದ ವೇತನ ಕಾರ್ಯದರ್ಶಿಯವರು ದಿನಾಂಕ: 28.10.2003ರಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಒಂದನೇ ವಲಯ, ಇವರಿಗೆ ಪತ್ರ ಬರೆದು ಈ ಸಂಘವನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಯನ್ನು ನೇಮಕ ಮಾಡಿಕೊಡುವಂತೆ ಕೋರಿರುತ್ತಾರೆ. ಉಲ್ಲೇಖ (2)ರಲ್ಲಿ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ ಇವರು ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಈ ಕಛೇರಿಗೆ ಸೂಚನೆಯನ್ನು ನೀಡಿರುತ್ತಾರೆ, ಈ ಸೂಚನೆಯಂತೆ ಉಲ್ಲೇಖ (3)ರಲ್ಲಿ ಈ ಕಛೇರಿಯಿಂದ ವರದಿಯನ್ನು ಅಪೇಕ್ಷಿಸಿ ಸಹಾಯಕ ನಿಬಂಧಕರು, ಒಂದನೇ ವಲಯ ಇವರಿಗೆ ಪತ್ರ ಬರೆಯಲಾಗಿತ್ತು, ಅದರಂತೆ, ಸಹಾಯಕ ನಿಬಂಧಕರು, ಒಂದನೇ ವಲಯ ಇವರು ಉಲ್ಲೇಖ (4)ರಲ್ಲಿ ಈ ಸಂಘವನ್ನು ಸಮಾಪನೆಗೊಳಿಸಲು ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವೆಯಂತೆ ಈ ಸಂಘವು ನೊಂದಣಿ ಸಂಖ್ಯೆ: ಎಆರ್‌ಬಿ/ 868 ದಿನಾಂಕ: 10.11.1955ರಲ್ಲಿ ನೊಂದಣಿಯಾಗಿದ್ದು ಕೆಲವು ವರ್ಷಗಳಿಂದ ಸ್ಥಗಿತಗೊಂಡಿದ್ದ ಕಾರಣ ಸಂಘದ ಸದಸ್ಯರೆಲ್ಲರೂ ಸೇರಿ ವಾರ್ಷಿಕ ಮಹಾಸಭೆಯಲ್ಲಿ ಚರ್ಚಿಸಿ ಈ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ನಡವಳಿಕೆ ಸಲ್ಲಿಸಿರುವುದಾಗಿ, ಈ ನಡವಳಿಕೆಯಂತೆ ಸಂಘದ ಸದಸ್ಯರು ಹಾಗೂ ಪದಾಧಿಕಾರಿಗಳು ಸೇರಿ ತೆಗೆದುಕೊಂಡಿರುವ ಒಮ್ಮತ್ರದ ತೀರ್ಮಾನವಾಗಿರುವುದರಿಂದ ಸಂಘವನ್ನು ಸಮಾಪನೆ ಮಾಡುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಸಂಘವನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಯನ್ನು ನೇಮಕ ಮಾಡಬೇಕೆಂದು ಸಹಾಯಕ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಸರ್ವಸದಸ್ಯರ ಸಭೆ ದಿನಾಂಕ:30.10.2002ರಂದು ಒಮ್ಮತದ ತೀರ್ಮಾನ ತೆಗೆದುಕೊಂಡಿರುವ ಹಿನ್ನೆಲೆಯಲ್ಲಿ, ಆಡಳಿತ ಮಂಡಳಿ ಸದಸ್ಯರು ಸಹ ಈ ಸಂಘವನ್ನು ಸಮಾಪನೆಗೊಳಿಸಲು ಚರ್ಚಿಸಿ ಇಲಾಖೆಗೆ ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಶಿಫಾರಸ್ಸಿನಂತೆ ಈ ಸಂಘವನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಯನ್ನು ನೇಮಕ ಮಾಡುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಗಿನ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(1)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ: 21.11.2001ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ.ಎ. ಕುಮಾರ್, ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ಮೇಲೆ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹೆಚ್.ಎಂ.ಟಿ. ಸಹಕಾರ ಸಂಘ ನಿ., ಹೆಚ್.ಎಂ.ಟಿ. ಅಂಚೆ, ಬೆಂಗಳೂರು-31 ಇದನ್ನು ಸಮಾಪನೆಗೊಳಿಸಿ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 73ರ ರೀತ್ಯ ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ-1, ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಛೇರಿ, ಒಂದನೇ ವಲಯ, ಬೆಂಗಳೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯಿದೆ ಕಲಂ 74ರ ರೀತ್ಯಾ ಕ್ರಮ ಕೈಗೊಂಡು ವರದಿ ಸಲ್ಲಿಸುವುದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಮತ್ತು ಈ ಕಛೇರಿಯ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ: 30.10.2004ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು-1,
ಪಿ.ಆರ್. 1730 ಬೆಂಗಳೂರು ನಗರ ಜಿಲ್ಲೆ.

**ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ವಿಜಾಪುರ ಜಿಲ್ಲೆ, ವಿಜಾಪುರ ಇವರ ನ್ಯಾಯಾಲಯದಲ್ಲಿ**

**ಉಪಸ್ಥಿತರು:** ಶ್ರೀ ಕೆ.ಆರ್. ಗೌಡ್ರ,
ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು,
ವಿಜಾಪುರ ಜಿಲ್ಲೆ, ವಿಜಾಪುರ.

**ಫಿರ್ಯಾದುದಾರರು:**

1. ಶ್ರೀ ಶ್ಯಾಂರಾಜ ಸಜ್ಜನ
ಪಿ.ಎಸ್.ಐ. ಮನಗೂಳಿ ಪೊಲೀಸ್‌ಠಾಣೆ,
ಗುನ್ನೆ, ನಂ.21:2004, ದಿನಾಂಕ:29.01.2004.

ವಿರುದ್ಧ

**ಆರೋಪಿಗಳು:**

1. ಬಾಬು ತಂದೆ ಸೀತಾರಾಮ ಚವಾಣ,
ಸಾ: ಮುಳವಾಡ ತಾಂಡಾ ನಂ.2, ವಾಹನದ ಮಾಲೀಕರು.
2. ತುಳಜಾರಾಮ ತಂದೆ ಶಂಕರ ಚವಾಣ,
ಸಾ:ಮುಳವಾಡ ತಾಂಡಾ ನಂ.2.

**ತನಿಖಾಧಿಕಾರಿಗಳು:**

ಶ್ರೀ ಪಿ.ಬಿ. ಶಿಂಧೆ,
ಅಬಕಾರಿ ಉಪ ನಿರೀಕ್ಷಕರು, ಬಸವನ ಬಾಗೇವಾಡಿ, ಉಪವಲಯ.
ಗುನ್ನೆ ನಂ.15:2003-04, ದಿನಾಂಕ:09.03.2004.

**ಪ್ರಸ್ತಾವನೆ:**

ದಿನಾಂಕ:29.01.2004ರಂದು ಮುಳವಾಡ ತಾಂಡಾ ನಂ.2ರಲ್ಲಿ ಪಿ.ಎಸ್.ಐ. ಮನಗೂಳಿ ಪೊಲೀಸ್ ಮತ್ತು ಅಬಕಾರಿ ಸಿಬ್ಬಂದಿಯವರು ಕೂಡಿಕೊಂಡು ಅಬಕಾರಿ ದಾಳಿ ಮಾಡಲು ಮುಳವಾಡ ತಾಂಡಾ ನಂ.2 ನೇದ್ದರ ಕ್ರಾಸ್ ಸಮೀಪ ಬಂದಾಗ ತಾಂಡಾದಿಂದ ಮುಂಜಾನೆ 10-30 ಗಂಟೆಗೆ ಇಬ್ಬರು ಸುಜುಕಿ ಮೋಟಾರ್ ಸೈಕಲ್ ನಂಬರ್: ಕೆಎ:28:ಜೆ:6145ರ ಮೇಲೆ ಬರುತ್ತಿರುವುದನ್ನು ಕಂಡು ಅಧಿಕಾರಿಗಳಿಗೆ ಸಂಶಯ ಬಂದು ಸದರಿ ಮೋಟಾರ್ ಸೈಕಲ್‌ದವರಿಗೆ ನಿಲ್ಲಿಸಲು ಹೇಳಿದಾಗ ಕ್ರಾಸ್ ರೋಡ್ ಮೇಲೆ ಮೋಟಾರ್ ಸೈಕಲ್ ಬಿಟ್ಟು ಓಡಲು ಪ್ರಯತ್ನಿಸುತ್ತಿದ್ದಾಗ ಅವರನ್ನು ಹಿಡಿದು ತಪಾಸಣೆ ಮಾಡಿದಾಗ ಅಕ್ರಮವಾಗಿ ಸಾಗಿಸುತ್ತಿದ್ದ 10 ಲೀ. ದಷ್ಟು ಕಳ್ಳಭಟ್ಟಿ ಸಾರಾಯಿ ತುಂಬಿದ ಒಂದು ಪ್ಲಾಸ್ಟಿಕ್ ಕ್ಯಾನು ಮತ್ತು ಒಂದು ಪ್ಲಾಸ್ಟಿಕ್ ಚೀಲದಲ್ಲಿ ಅಂದಾಜು 20 ಕೆ.ಜಿ. ಯಷ್ಟು ನವಸಾಗರ ಇರುವುದು ಪತ್ತೆ ಹಚ್ಚಿ ಅಬಕಾರಿ ಕಾಯ್ದೆ ಕಲಂಗಳ ಉಲ್ಲಂಘನೆಗಾಗಿ ಸ್ಥಳ ಪಂಚನಾಮೆ ಜರುಗಿಸಿ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಮನಗೂಳಿ ಪೊಲೀಸ್ ಠಾಣೆ ರವರು ಕಳ್ಳಭಟ್ಟಿ ಸಾರಾಯಿ ನವಸಾಗರ ಮತ್ತು ಸುಜುಕಿ ಮೋಟಾರ್ ಸೈಕಲ್ ಜಪ್ತು ಮಾಡಿ ಆರೋಪಿತರನ್ನು ಬಂಧಿಸಿ ಗುನ್ನೆ, ನಂ.21:2004, ದಿನಾಂಕ: 29.01.2004ರಂದು ದಾಖಲಿಸಿರುತ್ತಾರೆ. ನಂತರ ಸದರಿ ಗುನ್ನೆಗೆ ಸಂಬಂಧಿಸಿದ ಕಾಗದ ಪತ್ರಗಳು ಹಾಗೂ ಮುದ್ದೇಮಾಲುಗಳನ್ನು ದಿನಾಂಕ: 09.03.2004ರಂದು ಅಬಕಾರಿ ಉಪ ನಿರೀಕ್ಷಕರು ಬಸವನ ಬಾಗೇವಾಡಿ ಉಪವಲಯ ಇವರಿಗೆ ಹಸ್ತಾಂತರಿಸಿದ್ದು ಸದರಿ ಅಬಕಾರಿ ಉಪ ನಿರೀಕ್ಷಕರು ದಾಖಲಾತಿಗಳ ಪ್ರತಿಗಳೊಂದಿಗೆ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ. ವಶಪಡಿಸಿಕೊಂಡ ವಾಹನ ಸುಜುಕಿ ಮೋಟಾರ್ ಸೈಕಲ್ ನಂ.ಕೆಎ:28:ಜೆ:6145ನ್ನು ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಿಸಲು ಉಪಯೋಗಿಸಿದ್ದು ಮೇಲ್ನೋಟಕ್ಕೆ ಈ ಪ್ರಾಧಿಕಾರಕ್ಕೆ ಕಂಡು ಬರುತ್ತದೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ವಿಜಾಪುರ ಇವರಿಗೆ ಪತ್ರವನ್ನು ಬರೆದು ಬಿ- ಎಕ್ಸ್‌ಟ್ರ್ಯಾಕ್ಟ್ ಆಧಾರದ ಮೇಲೆ ವಾಹನದ ಮಾಲೀಕರಾದ ಬಾಬು ಸೀತಾರಾಮ ಚವಾಣ, ಸಾ: ಮುಳವಾಡ ತಾಂಡಾ ನಂ.2, ಬ. ಬಾಗೇವಾಡಿ ತಾಲ್ಲೂಕು ಇವರಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಪ್ರಕಾರ ಕಾರಣ ಕೇಳುವ ನೋಟೀಸನ್ನು ದಿನಾಂಕ: 17.03.2004ರಂದು 26.07.2004ಮತ್ತು 20.10.2004ರಂದು ಈ ಪ್ರಾಧಿಕಾರದಿಂದ ತೆಗೆಯಲಾಗಿತ್ತು. ಅಬಕಾರಿ ಉಪ ನಿರೀಕ್ಷಕರು ಬ. ಬಾಗೇವಾಡಿ ಉಪವಲಯ ಇವರು ಸದರಿ ಮೂರು ನೋಟೀಸುಗಳನ್ನು ದಿನಾಂಕ:29.03.2004, 30.07.2004 ಮತ್ತು 29.10.2004ರಂದು ವಾಹನದ ಮಾಲೀಕರಿಗೆ ನೋಟೀಸನ್ನು ಜಾರಿ ಮಾಡಿ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಶ್ರೀ ಎ.ಕೆ. ಗಂಜಿಹಾಳ, ವಕೀಲರು ಬ.ಬಾಗೇವಾಡಿ ಇವರು ದಿನಾಂಕ: 08.04.2004ರಂದು ಆರೋಪಿತನ ಪರವಾಗಿ ತಕರಾರು ಅರ್ಜಿ ಸಲ್ಲಿಸಿರುತ್ತಾರೆ. ಇದರ ಬಗ್ಗೆ ಈ ಪ್ರಾಧಿಕಾರದಿಂದ ದಿನಾಂಕ: 01.09.2004ರಂದು ವಕೀಲರಿಗೆ ಮತ್ತು ವಾಹನದ ಮಾಲೀಕರಿಗೆ ನೋಟೀಸು ನೀಡಲಾಯಿತು. ಸದರಿ ನೋಟೀಸಿನಲ್ಲಿ ನಿಮ್ಮ ಹೇಳಿಕೆ ಏನಾದರೂ ಇದ್ದರೆ ಏಳು (7) ದಿನಗಳ ಒಳಗಾಗಿ ಸಲ್ಲಿಸಲು ತಿಳಿಸಲಾಗಿತ್ತು. ಒಂದು ವೇಳೆ ನಿಮ್ಮ ಹೇಳಿಕೆ ಸಲ್ಲಿಸದಿದ್ದಲ್ಲಿ ನಿಮ್ಮ ಹೇಳಿಕೆ ಏನು ಇಲ್ಲವೆಂದು ತಿಳಿದು ಏಕಪಕ್ಷೀಯವಾಗಿ ನಿರ್ಣಯವನ್ನು ತೆಗೆದುಕೊಳ್ಳಲಾಗುವುದೆಂದು ತಿಳಿಸಲಾಗಿತ್ತು.

ಆದರೆ ಶ್ರೀ ಎ.ಕೆ. ಗಂಬಿಹಾಳ, ವಕೀಲರು ಇಲ್ಲಿಯವರೆಗೆ ಯಾವುದೇ ಹೇಳಿಕೆ ಸಲ್ಲಿಸಿರುವುದಿಲ್ಲ, ಮತ್ತು ಪ್ರಾಧಿಕಾರದ ಮುಂದೆ ಹಾಜರು ಆಗಿರುವುದಿಲ್ಲ. ಅದರಂತೆ ವಾಹನದ ಮಾಲೀಕರಾದ ಶ್ರೀ ಬಾಬು ಸೀತಾರಾಮ ಚವಾಣ, ಇವರಿಗೆ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳುವುದಾಗಿ ತಿಳಿಸಿ ಮೂರು ಸಾರಿ ನೋಟೀಸುಗಳನ್ನು ಅಬಕಾರಿ ಸಬ್ ಇನ್ಸ್‌ಪೆಕ್ಟರ್ ಬ. ಬಾಗೇವಾಡಿ ಇವರು ಜಾರಿ ಮಾಡಿದ್ದರೂ ಕೂಡ ಯಾವುದೇ ಹೇಳಿಕೆ ನೀಡಿರುವುದಿಲ್ಲ. ಮತ್ತು ಪ್ರಾಧಿಕಾರದ ಮುಂದೆ ಹಾಜರು ಆಗಿರುವುದಿಲ್ಲ.

ಈ ಪ್ರಕರಣದಲ್ಲಿ ಮಾದರಿಯಾಗಿ ತೆಗೆದ ಕಳ್ಳಭಟ್ಟಿ ಸಾರಾಯಿ ಮತ್ತು ನವಸಾಗರ ರಾಸಾಯನಿಕ ಪ್ರಯೋಗಾಲಯಕ್ಕೆ ಕಳುಹಿಸಿ ವರದಿ ಪಡೆಯಲಾಗಿ ರಸಾಯನಿಕ ತಜ್ಞರು ಮಾನವ ಸೇವನೆಗೆ ಯೋಗ್ಯವಿಲ್ಲವೆಂದು ದೃಢೀಕರಿಸಿರುತ್ತಾರೆ. ಅಬಕಾರಿ ನಿರೀಕ್ಷಕರು ಬ.ಬಾಗೇವಾಡಿ ವಲಯ ಇವರು ವರದಿ ಸಲ್ಲಿಸಿ ಸದರಿ ವಾಹನವನ್ನು ಇಡಲು ಸ್ಥಳಾವಕಾಶ ಇಲ್ಲದೇ ಇರುವುದರಿಂದ ಮತ್ತು ವಾಹನವು ಮಳೆ, ಗಾಳಿ, ಬಿಸಿಲಿಗೆ ಸಿಕ್ಕು ಹಾಳಾಗುವುದರಿಂದ ಮತ್ತು ಹವಾಮಾನದ ವೈಪರೀತ್ಯಗಳಿಗೆ ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಳ್ಳುವ ಸಂಭವ ಇದ್ದು ಅದರ ಮೌಲ್ಯವು ಕಡಿಮೆಯಾಗುವ ಸಾಧ್ಯತೆ ಇರುವುದರಿಂದ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ವರದಿ ಸಲ್ಲಿಸಿರುತ್ತಾರೆ.

ಸದರಿ ಪ್ರಕರಣವು ದಾಖಲಾಗಿ ಸುಮಾರು 10 ತಿಂಗಳು ಕಳೆದರೂ ಈವರೆಗೆ ಯಾವುದೇ ವ್ಯಕ್ತಿಯು ವಾಹನ ತನ್ನದೆಂದು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷ್ಯಾಧಾರಗಳೊಂದಿಗೆ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿ ವಾಹನದಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಿಸುತ್ತಿರುವುದು ದೃಢಪಟ್ಟಿರುತ್ತದೆ. ಲಭ್ಯವಿರುವ ದಾಖಲೆ, ಪುರಾವೆಗಳನ್ನು ಅವಲೋಕಿಸಿ ಕೂಲಂಕುಷವಾಗಿ ಪರಿಶೀಲಿಸಿ ಸದರಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಭಾವಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶದ ಸಂಖ್ಯೆ: ಇಎಕ್ಸ್‌ಇ:ಬಿಜೆಪಿ: ಡಿಟಿಸಿಆರ್: 131:2003-04, ದಿನಾಂಕ: 1ನೇ ಡಿಸೆಂಬರ್, 2004**

ಕೆ.ಆರ್. ಗೌಡ್ರ, ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ವಿಜಾಪುರ ಜಿಲ್ಲೆ, ವಿಜಾಪುರ ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸುಜುಕಿ ಮೋಟಾರ್‌ಸೈಕಲ್ ನಂ.ಕೆಎ:28:ಜೆ:6142 ನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 01.12.2004ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿರುವುದು.

**ಕೆ.ಆರ್. ಗೌಡ್ರ**

ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು,

ಪಿ.ಆರ್. 1732 ವಿಜಾಪುರ ಜಿಲ್ಲೆ, ವಿಜಾಪುರ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಅಬಕಾರಿ/ಸಿಆರ್ಎಂ/ ಡಿಟಿಸಿಆರ್/ 149/ 1999-2000, ದಿನಾಂಕ: 30ನೇ ನವೆಂಬರ್, 2004**

**ಉಪಸ್ಥಿತರು:** ಶ್ರೀ ಎ.ಎಸ್. ವಿಶ್ವರೂಪ, ಕೆ.ಇ.ಎಸ್.
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದುದಾರರು:**
ಜಕ್ಕಹಳ್ಳಿ ಚೆಲುವದಾಸಯ್ಯ ಲೀಲರಾಜ,
ಪಿ.ಎಸ್.ಐ. ಕಡಲು ಪಡೆ ಕಾರವಾರ.
(ಮಾನ್ಯ ಸಹಾಯಕ ಅಭಿಯೋಜಕ ನಿರ್ದೇಶಕರು,
ಕಾರವಾರ ರವರು ಪ್ರತಿನಿಧಿಸಿರುತ್ತಾರೆ)

**ವಿರುದ್ಧ**

**ಆರ್ಜಿದಾರ:**
1. ಉದಯ ಕಾಮು ತಾಂಡೇಲ್,
ಸಾ: ಚಿತ್ತಾಕುಲಾ ಕಾರವಾರ.
(ಶ್ರೀ ಎ.ಡಿ. ಚಿಪ್ಕರ ಮತ್ತು ಶ್ರೀ ವೈ.ಎಸ್. ನಾಯ್ಕ, ವಕೀಲರು,
ಕಾರವಾರ ಇವರುಗಳು ಪ್ರತಿನಿಧಿಸಿರುತ್ತಾರೆ)

**ತೀರ್ಪು**

1. ಈ ಪ್ರಕರಣದ ಫಿರ್ಯಾದುದಾರರು ತಮಗೆ ಸಿಕ್ಕಂತಹ ಖಚಿತವಾದ ವರ್ತಮಾನದ ಮೇರೆಗೆ ದಿನಾಂಕ: 29.10.99 ರಂದು ತನ್ನ ಸಿಬ್ಬಂದಿಗಳು ಹಾಗೂ ಇಬ್ಬರು ಪಂಚರನ್ನು ಜೊತೆಗೆ ಕರೆದುಕೊಂಡು ಪೊಲೀಸು ದೇವಗಡ ಎಂಬ ಲಾಂಚ್ ತೆಗೆದುಕೊಂಡು ಅರಬ್ಬಿ ಸಮುದ್ರದ ಕಡೆಗೆ ಕೂರ್ಮಗಡ ನಡುಗಡ್ಡೆಯ ಹತ್ತಿರ ಮರೆಯಾಗಿ ನಿಂತುಕೊಳ್ಳಲಾಗಿ, ಗೋವಾ ಕಡೆಯಿಂದ ಒಂದು ನಾಡದೋಣಿಗೆ ಮಶೀನು ಹಚ್ಚಿಕೊಂಡು ಬರುತ್ತಿರುವುದನ್ನು ನೋಡಿ ಸಂಶಯ ಬಂದು ತಮ್ಮ ಲಾಂಚ್ ಮುಖಾಂತರ ಆ ದೋಣಿಯನ್ನು ಹಿಂಬಾಲಿಸಿದಾಗ, ಸದರಿ ಯಂತ್ರಚಾಲಿತ ನಾಡದೋಣಿಯನ್ನು ಹಿಂತಿರುಗಿಸಿ ಗೋವಾ ಕಡೆಗೆ ಹೋಗುತ್ತಿರುವಾಗ ತಮ್ಮ ಲಾಂಚಿನ ಸಹಾಯದಿಂದ ಬೆನ್ನಟ್ಟಿ ಹಿಡಿಯಲಾಗಿ, ಅದರಲ್ಲಿ ಆರು ಜನ ಆರೋಪಿಗಳು ಮತ್ತು ಅಬಕಾರಿ ಗುನ್ಹೆಗೆ ಸಂಬಂಧಿಸಿದ ಮಾಲುಗಳು ದೊರೆತವಾಗಿ, ಮತ್ತು ಆ ಸಮಯದಲ್ಲಿ ರಾತ್ರಿ 22-30 ಸಮುಯವಾಗಿದ್ದುದಾಗಿ, ಆರೋಪಿಗಳಿಗೆ ಅಬಕಾರಿ ಮಾಲನ್ನು ಕರ್ನಾಟಕ ರಾಜ್ಯಕ್ಕೆ ಸಮುದ್ರದ ಮೂಲಕ ಸಾಗಿಸಲು ಅಧಿಕೃತ ಪಾಸ್ ಅಥವಾ ಪರ್ಮಿಟ್ ಇದೆಯೇ ಎಂದು ಕೇಳಲಾಗಿ ಅವರು ತಮ್ಮ ಬಳಿ ಇಲ್ಲವೆಂದು ತಿಳಿಸಿದಾಗ ನಾಡದೋಣಿ ಮತ್ತು ಅದಕ್ಕೆ ಇರುವ ಮಶೀನು ಹಾಗೂ ಅಬಕಾರಿ ಮುದ್ದೆಮಾಲು ಮತ್ತು ಆರೋಪಿಗಳನ್ನು ತಮ್ಮ ಲಾಂಚ್ ಶೆಡ್ ಕೋಡಿಭಾಗಕ್ಕೆ ತಂದು ಪಂಚನಾಮೆ ಬರೆದು ಪಂಚರ ಸಮಕ್ಷಮ ಅಬಕಾರಿ ಮಾಲನ್ನು ಬಿಚ್ಚಿ ನೋಡಲಾಗಿ ಅದರಲ್ಲಿ 65 ಪೊಟ್ಲೆಗಳಿದ್ದು ಪ್ರತಿಯೊಂದರಲ್ಲಿ 375 ಮಿ.ಲೀ.ನ 48 ಸೀಸೆಗಳಂತೆ ಒಟ್ಟು 3,120 ಗೋವಾ ಡೋಲರಿಚ್ ಇಂಡಸ್ಟ್ರೀಜ್ ಮಾಷೆಮ್ ಲೋಲೆಮ್ ಎಂಬ ಗೋವಾ ತೆಂಗಿನ ಸರಾಯಿ ಇರುವ ಸೀಸೆಗಳು ಇದ್ದುದು ಕಂಡುಬಂದು ಈ ಪೊಟ್ಲೆಗಳಿಂದ ಪ್ರತಿಯೊಂದರಿಂದ ಒಂದೊಂದು ಸೀಸೆಯನ್ನು ತೆಗೆದು ಅದಕ್ಕೆ ಪಂಚರ ಮತ್ತು ತಮ್ಮ ಸಹಿ ಇರುವ ಲೇಬಲ್ ಕಟ್ಟಿ, ಪಿ.ಎಸ್.ಐ. ಸೀ-ಪ್ಯಾಟ್ರೋಲ್ ಕಾರವಾರ ಎಂಬ ಮೊಹರಿನ ಅರಗಿನ ಸೀಲ್ ಮಾಡಿ ರಾಸಾಯನಿಕ ಪರೀಕ್ಷೆಗಾಗಿ ಪ್ರತ್ಯೇಕವಾಗಿ ತೆಗೆದು, ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32ರಂತೆ ಶಿಕ್ಷಾರ್ಹವಾಗಿದ್ದರಿಂದ ದೋಣಿ, ಮಶೀನು, ಅದರಲ್ಲಿದ್ದ 60 ಲೀಟರ್ 2 ಪ್ಲಾಸ್ಟಿಕ್ ಕ್ಯಾನುಗಳಲ್ಲಿದ್ದ 60 ಲೀಟರಿನಷ್ಟು ಸೀಮೆ ಎಣ್ಣೆ, ಮೂರು ಹುಟ್ಟುಗಳು ಹಾಗೂ ಒಂದು ಎಂಕರ್ ಮತ್ತು

ಅದಕ್ಕೆ ಇರುವ ನಾಯಲನ್ ಹಗ್ಗ ಹಾಗೂ ಅಬಕಾರಿ ಸ್ವತ್ತನ್ನು ಜಪ್ತುಮಾಡಿ ಆರೋಪಿತರನ್ನು ದಸ್ತಗಿರಿಮಾಡಿ ಮುಂದಿನ ಕ್ರಮಕ್ಕಾಗಿ ಚಿತ್ತಾಕುಲಾ ಪೊಲೀಸ್ ಠಾಣೆಗೆ ಹಸ್ತಾಂತರಿಸಿದ ಪ್ರಕಾರ ಚಿತ್ತಾಕುಲಾ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ: 137/99 ದಿನಾಂಕ: 30.10.1999 ರಂತೆ ಪ್ರಕರಣ ದಾಖಲಿಸಿ, ಗುನ್ನೆಗೆ ಸಂಬಂಧಿಸಿದ ಪ್ರ.ಮಾ.ವರದಿ, ಪಂಚನಾಮೆ, ಸ್ವತ್ತಿನಪಟ್ಟಿಯ ಪ್ರತಿಗಳನ್ನು ಈ ಪ್ರಾಧಿಕಾರದಲ್ಲಿ ಮುಂದಿನ ಕ್ರಮಕ್ಕಾಗಿ ಸಲ್ಲಿಸಿರುತ್ತಾರೆ.

2. ಈ ಪ್ರಕರಣದಲ್ಲಿ ಜಪ್ತಿಯಾದಂತಹ ಎಲ್ಲಾ ಸ್ವತ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುವುದಕ್ಕಾಗಿ ಪ್ರಕರಣದ ಎಲ್ಲಾ ಆರೋಪಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ: 12.11.1999ರಂದು ಕಾರಣ ಕೇಳಿ ನೋಟಿಸನ್ನು ಕಳುಹಿಸಲಾಗಿ ಅದನ್ನು ದಿನಾಂಕ: 21.12.1999 ರಂದು ತನಿಖಾಧಿಕಾರಿಗಳು ಜಾರಿ ಮಾಡಿ ಪ್ರಾಧಿಕಾರಕ್ಕೆ ಮರಳಿಸಿದ್ದು, ಸದ್ರಿ ನೋಟಿಸಿಗೆ ಯಾರು ತನ್ನ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ.

3. ದಿನಾಂಕ: 12.11.1999ರಂದು ಶ್ರೀ ಎ.ವಿ. ಚಿಪ್ಕರ, ವಕೀಲರು ಕಾರವಾರ ಇವರು ಈ ಪ್ರಾಧಿಕಾರದಲ್ಲಿ ಅರ್ಜಿಯನ್ನು ಸಲ್ಲಿಸುತ್ತಾ, ಈ ಪ್ರಕರಣದಲ್ಲಿ ಜಪ್ತಿಯಾಗಿರುವ ದೋಣಿ ಮತ್ತು ಮಶೀನು ಶ್ರೀ ಉದಯ ಕಾಮು ತಾಂಡೇಲ್, ಸಾ: ಚಿತ್ತಾಕುಲಾ ಕಾರವಾರ ಇವರ ಮಾಲೀಕತ್ವದ್ದಾಗಿದ್ದು, ಪೊಲೀಸರು ಹೊರಿಸಿರುವ ಆರೋಪದ ಬಗ್ಗೆ ಅರ್ಜಿದಾರರಿಗೇನೂ ಗೊತ್ತಿರುವುದಿಲ್ಲವೆಂದೂ ಸದ್ರಿ ದೋಣಿಯು ದಿನನಿತ್ಯದ ಮೀನುಗಾರಿಕೆಯ ಕೆಲಸಕ್ಕಾಗಿ ಬೇಕಾಗಿರುವುದರಿಂದ ಅದನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ವಿನಂತಿಸಿರುತ್ತಾರೆ. ಆದರೆ ಈ ಪ್ರಾಧಿಕಾರದಿಂದ ಸದ್ರಿ ದೋಣಿಯನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಿರುವುದಿಲ್ಲ.

4. ಪ್ರಕರಣದ ತನಿಖಾಧಿಕಾರಿಗಳು ದಿನಾಂಕ: 25.02.2000 ರಂದು ಈ ಪ್ರಾಧಿಕಾರಕ್ಕೆ ರಾಸಾಯನಿಕ ವಿಶ್ಲೇಷಣಾ ವರದಿಯ ದೃಢೀಕೃತ ನಕಲನ್ನು ಮುಂದಿನ ಕ್ರಮಕ್ಕಾಗಿ ಸಲ್ಲಿಸಿರುತ್ತಾರೆ. ರಾಸಾಯನಿಕ ವಿಶ್ಲೇಷಣಾ ವರದಿಯ ಪ್ರಕಾರ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿದ್ದು, ಅದರಲ್ಲಿಯ ಮದ್ಯಸಾರದ ಅಂಶವು $25^0$ ಸೆಂಟಿಗ್ರೇಡ್‌ಗಳಲ್ಲಿ ಶೇಕಡಾ 25 ವಿ/ವಿ ರಷ್ಟು ಇರುವುದಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ.

5. ಅದೇ ರೀತಿ ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ/ ಸಿಆರ್‌ಎಂ/ ಡಿಟಿಸಿಆರ್/ 149/ 1999-2000, ದಿನಾಂಕ:04.04.2000 ರಂತೆ ಈ ಪ್ರಕರಣದಲ್ಲಿ ಜಪ್ತಿಯಾದಂತಹ ಫೆನ್ನಿಯ ಸೀಸೆಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಅವುಗಳನ್ನು ಅಬಕಾರಿ ಉಪ ಅಧೀಕ್ಷಕರು ಡೆಪ್ಯುಟಿ ಕಮೀಶನರ್ ಆಫ್ ಎಕ್ಸೈಜ್ ರವರ ಕಛೇರಿ ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ಸಮಕ್ಷಮ ನಾಶಪಡಿಸಲು ಹಾಗೂ ಖಾಲಿ ಸೀಸೆಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ಈಗಾಗಲೇ ಆದೇಶ ನೀಡಲಾಗಿರುತ್ತದೆ.

6. ಈ ಪ್ರಕರಣದಲ್ಲಿ ಜಪ್ತಿಯಾದಂತಹ ಸ್ವತ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುವುದಕ್ಕಾಗಿ ಕಾರಣ ಕೇಳಿ ನೋಟೀಸನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ(1)(ಎ) ರನ್ವಯ ಅರ್ಜಿದಾರರಾದ ಉದಯಕಾಮು ತಾಂಡೇಲ್ ಇವರಿಗೆ ಜಾರಿಗಾಗಿ ಕಳುಹಿಸಲಾಗಿ ಸದ್ರಿಯವರಿಗೆ ತನಿಖಾಧಿಕಾರಿಗಳು ದಿನಾಂಕ: 24.04.2000ರಂದು ಜಾರಿ ಮಾಡಿದ್ದು ಸದ್ರಿ ಕಾರಣಕೇಳಿ ನೋಟಿಸಿಗೆ ಅರ್ಜಿದಾರರು ತನ್ನ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ.

7. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ(1) ಸಿ ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿಆರ್‌ಪಿಸಿ ಕಲಂ 207ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕಲಂ 32 ಮತ್ತು 38-ಎ ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿಡಬ್ಲ್ಯೂ 1 ರಿಂದ 3ರ ವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ, ನಿಶಾನೆ ಪಿ-1 ರಿಂದ 2 ರವರೆಗಿನ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಪಿ.ಡಬ್ಲ್ಯೂ-2 ಮತ್ತು 3ನೇಯವರುಗಳು ಈ ಪ್ರಕರಣದ ಪಂಚಸಾಕ್ಷಿದಾರರಾಗಿದ್ದು ಸದ್ರಿಯವರುಗಳು ಪ್ರತಿಕೂಲ ಸಾಕ್ಷಿಯನ್ನು ನುಡಿದಿರುತ್ತಾರೆ. ಈ ಪ್ರಕರಣದಲ್ಲಿ ತನಿಖಾಧಿಕಾರಿಯ ಸಾಕ್ಷಿಯನ್ನು ಕೈಬಿಡಲಾಗಿದೆ.

8. ಅಭಿಯೋಜನೆಪರ ಸಾಕ್ಷಿದಾರರ ಹೇಳಿಕೆಗಳು ಹಾಗೂ ಸಲ್ಲಿಸಲಾಗಿದ್ದ ಲಿಖಿತ ದಾಖಲೆಗಳ ಆಧಾರದ ಮೇಲೆ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡುಬಂದಿದ್ದರಿಂದ ದಂಡ ಪ್ರಕ್ರಿಯಾ ಸಂಹಿತೆ ಕಲಂ 313 ರಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಪಡೆದುಕೊಳ್ಳುವುದಕ್ಕಾಗಿ ಅರ್ಜಿದಾರರಿಗೆ ವಿಚಾರಣಾ ನೋಟಿಸನ್ನು ಕಳುಹಿಸಿದಾಗ ಸದ್ರಿಯವರು ದಿನಾಂಕ: 11.07.2003ರಂದು ಮೃತಪಟ್ಟಿರುವುದಾಗಿ ವರದಿಯಾಗಿರುತ್ತದೆ. ಆದಾಗ್ಯೂ ಅರ್ಜಿದಾರರ ಪರ ವಕೀಲರು ತನ್ನ ಪರ ಸಾಕ್ಷಿಗಾಗಿ ಇನ್ನೊಂದು ಮುದ್ದತ್ತು ನೀಡಲು ದಿನಾಂಕ: 10.03.2004 ರಂದು ಕೋರಿದಾಗ ಅನಂತರದ ಅವಧಿಗೆ ಆರು ಅವಕಾಶಗಳನ್ನು ನೀಡಿದಾಗಲೂ ಅರ್ಜಿದಾರರ ಪಕ್ಷದವರು ಒಮ್ಮೆಯೂ ಈ ಪ್ರಾಧಿಕಾರದಲ್ಲಿ ಹಾಜರಿರುವುದಿಲ್ಲ ಹೀಗಾಗಿ ಅರ್ಜಿದಾರರ ಪರ ಯಾವುದೇ ಹೇಳಿಕೆ ಅಥವಾ ವಾದ ವಿವಾದ ಇಲ್ಲವೆಂದು ಪರಿಗಣಿಸಿ, ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರು ಮಂಡಿಸಿದ ವಾದ ವಿವಾದಗಳನ್ನು ಆಲಿಸಲಾಯಿತು. ಅಭಿಯೋಜನೆ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬಂತು.

**ವಿವಾದಾಂಶಗಳು:**

1. ದಿನಾಂಕ: 29.10.1999 ರಂದು ರಾತ್ರಿ 2-00 ಗಂಟೆಯ ಸಮಯಕ್ಕೆ ಚಿತ್ತಾಕುಲಾ ಪೊಲೀಸ್ ಠಾಣೆಯ ವ್ಯಾಪ್ತಿಗೆ ಬರುವ ಕೂರ್ಮಗಡ ನಡುಗಡ್ಡೆಯ ಹತ್ತಿರದಲ್ಲಿ ಅರಬ್ಬಿ ಸಮುದ್ರದಲ್ಲಿ ಯಮಹಾ ಮಶೀನನ್ನು ಹೊಂದಿದಂತಹ ದೋಣಿಯಲ್ಲಿ ಆರು ಜನ ಆರೋಪಿಗಳು 750 ಮಿ.ಲೀ.ನ 3.160 ಗೋವಾ ಡಾಲರಿಚ್ ಎಂಬ ಹೆಸರಿನ ತೆಂಗಿನ ಸರಾಯಿಯ ಸೀಲ್ಡ್ ಬಾಟಲುಗಳನ್ನು ಅನಧಿಕೃತವಾಗಿ ಸಾಗಿಸುತ್ತಿದ್ದರೆ? ಹೇಗೆ.

2. ಘಟನೆ ಸಂಭವಿಸಿದಾಗ ದೋಣಿಯು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ದೋಣಿಯ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಈ ದೋಣಿಯಲ್ಲಿ ಅಕ್ರಮ ಗೋವಾ ಫೆನ್ನಿಯ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ?

3. ದೋಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?

**ನನ್ನ ಉತ್ತರಗಳು ಈ ಕೆಳಕಂಡ ಕಾರಣಗಳಿಗಾಗಿ ಈ ಕೆಳಗಿನಂತಿವೆ**

10. ಅಂಶ 1: -ಸಕಾರಾತ್ಮಕವಾಗಿ
ಅಂಶ 2: -ನಕಾರಾತ್ಮಕವಾಗಿ
ಅಂಶ 3: -ಸಕಾರಾತ್ಮಕವಾಗಿ

**ಕಾರಣಗಳು**

11. ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಮುಖ್ಯ ಸಾಕ್ಷಿದಾರರಾದ ಪ್ರಕರಣದ ಫಿರ್ಯಾದಿ ಜೆ.ಸಿ. ಲೀಲರಾಜ, ಪಿ.ಎಸ್.ಐ. ರವರು ಈ ಪ್ರಾಧಿಕಾರದಲ್ಲಿ ದಿನಾಂಕ: 20.02.2002ರಂದು ಹಾಜರಾಗಿ ತನ್ನ ಸಾಕ್ಷಿಯಲ್ಲಿ ಮಾನ್ಯ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರಿಸುತ್ತಾ, ಈ ಘಟನೆ ಸಂಭವಿಸಿದಾಗ ತಯಾರಿಸಲಾದಂತಹ ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರು ಮಾಡಿದ ಪಾಟಿ ಸವಾಲಿನಲ್ಲಿ, ಅನಧಿಕೃತ ಸರಾಯಿಯ ಕಳ್ಳಸಾಗಾಣಿಕೆಯಾಗುತ್ತಿದೆ ಎಂಬ ಬಗ್ಗೆ ಬಂದ ಬಾತ್ಮಿಯ ಮೇರೆಗೆ ತಾನು ಸರ್ಚ್‌ವಾರೆಂಟ್‌ನ್ನು ಪಡೆದುಕೊಳ್ಳಲಿಲ್ಲವೆಂದೂ, ಸಮುದ್ರದಲ್ಲಿ ಮೀನು ಹಿಡಿಯುವ ಕ್ರಮವು ಅಕ್ಟೋಬರ್‌ದಿಂದ ಪ್ರಾರಂಭವಾಗುತ್ತದೆ ಎಂಬುವುದು ತನಗೆ ಗೊತ್ತಿಲ್ಲವೆಂದೂ, ಅಕ್ಟೋಬರ್ ಸಮಯದಲ್ಲಿ ಮೀನು ಹಿಡಿಯುವ ದೋಣಿಗಳು ಸಾಕಷ್ಟು ಇರುತ್ತವೆ ಎಂದು ಹೇಳಲು ಬರುವುದಿಲ್ಲವೆಂದೂ, ಮೀನು ಹಿಡಿಯಲು ಹೋಗುವವರು ಸಾಮಾನ್ಯವಾಗಿ ಸಂಜೆ ಹೋಗಿ ಬೆಳಿಗ್ಗೆ ಬರುತ್ತಾರೆ ಎನ್ನುವುದು ನಿಜ. ಆ ದಿನ ಈ ದೋಣಿಯನ್ನು ಬಿಟ್ಟರೆ ಬೇರೆ ಯಾವುದೇ ದೋಣಿಯನ್ನು ತಾನು ತಪಾಸಣೆ ಮಾಡಿಲ್ಲ. ಆದರೆ ನಾವು ಕೂರ್ಮಗಡ ಬಳಿ ಕಾಯುತ್ತಿರುವಾಗ ಇದೊಂದೆ ದೋಣಿ ಬಂದಿತ್ತೆಂದೂ, ಆ ದೋಣಿಗೆ ಮಶೀನ ಕೇವಲ 9 ಹೆಚ್.ಪಿ. ಇರುತ್ತದೆಂದು ಹೇಳಲು ಬರುವುದಿಲ್ಲ. ಮತ್ತು ಅದು ಪೊಲೀಸ್ ಲಾಂಚ್‌ಗಿಂತ ಕಡಿಮೆ ಸಾಮರ್ಥ್ಯವುಳ್ಳದ್ದು ಎನ್ನುವುದು ಹೇಳಲು ಬರುವುದಿಲ್ಲವೆಂದೂ, ತಮ್ಮನ್ನು ನೋಡಿ ದೋಣಿ ತಿರುಗಿಸಿ ಹೋಗುತ್ತಿರುವವರನ್ನು ಬೆನ್ನಟ್ಟಿ ಹಿಡಿದಿದ್ದೇವೆಂದೂ ಅವರು ತಪ್ಪಿಸಿಕೊಂಡು ಹೋಗಲು ಪ್ರಯತ್ನ ಮಾಡಲಿಲ್ಲ ಎಂದು ಹೇಳುವುದು ಸರಿಯಲ್ಲವೆಂದೂ, ಆರೋಪಿತರು ದೋಣಿಯ ಮೇಲಿಂದ ಹಾರಿಕೊಂಡು ಹೋಗಲು ಪ್ರಯತ್ನಿಸಲಿಲ್ಲ ಎನ್ನುವುದು ನಿಜ. ಈ ಫಿರ್ಯಾದಿನ ಬಗ್ಗೆ ತಾನು ಜೆಎಂಎಫ್‌ಸಿ ನ್ಯಾಯಾಲಯದಲ್ಲಿ ಸಾಕ್ಷಿ ನುಡಿದಿದ್ದೇನೆ. ಮಾನ್ಯ ಜೆಎಂಎಫ್‌ಸಿ ನ್ಯಾಯಾಲಯದಲ್ಲಿ ಈ ಪ್ರಕರಣದ ಆರೋಪಿತರು ಬಿಡುಗಡೆಯಾಗಿದ್ದಾರೆ ಎನ್ನುವುದು ತನಗೆ ಗೊತ್ತಿಲ್ಲ. ಈ ಪ್ರಕರಣದ ಪಂಚರು ತಮ್ಮ ಖಾಯಂ ಪಂಚರು ಎನ್ನುವುದು ಸರಿಯಲ್ಲ ತಾವು ಪಂಚನಾಮೆ ಮಾಡಲೇ ಇಲ್ಲ ಎನ್ನುವುದು ಸರಿಯಲ್ಲ. ಮೂಲ ಪಂಚನಾಮೆಯನ್ನು ಕ್ರಿಮಿನಲ್ ಕೋರ್ಟ್‌ನಲ್ಲಿ ಸಲ್ಲಿಸಿದ್ದು, ಅದರ ಯಥಾ ಝೆರಾಕ್ಸ್ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಹಾಜರುಪಡಿಸಿದ್ದೇನೆ. ಈ ಆರೋಪಿತರಿಗೂ ಹಾಗೂ ಜಪ್ತಾದ ಮುದ್ದೆ ಮಾಲಿಗೂ ಯಾವುದೇ ಸಂಬಂಧವಿಲ್ಲ ಎನ್ನುವುದು ಸರಿಯಲ್ಲವೆಂದೂ, ಜಪ್ತಿಯಾದ ಮುದ್ದೆ ಮಾಲಿಗೂ ಮತ್ತು ದೋಣಿಗೂ ಯಾವುದೇ ಸಂಬಂಧವಿಲ್ಲ ಎನ್ನುವುದು ಸರಿಯಲ್ಲ. ಆರೋಪಿಗಳು ಮೀನುಗಾರರು ಮತ್ತು ಅವರು ಮೀನುಗಾರಿಕೆಗೆ ಹೋಗಿದ್ದರು ಎನ್ನುವುದು ತನಗೆ ಗೊತ್ತಿಲ್ಲ. ಅಂಕಿ ಸಂಖ್ಯೆಗಳಿಗಾಗಿ ಸುಳ್ಳು ಪ್ರಕರಣವನ್ನು ದಾಖಲಿಸಿದ್ದೇವೆ ಅನ್ನುವುದು ಸರಿಯಲ್ಲ ಈ ಪ್ರಕರಣದಲ್ಲಿ ವಾರಸುದಾರರಿಲ್ಲದ ಮುದ್ದೆಮಾಲನ್ನು ಸೇರಿಸಿ ಸುಳ್ಳು ಪ್ರಕರಣವನ್ನು ದಾಖಲಿಸಿದ್ದೇವೆ ಅನ್ನುವುದು ಸರಿಯಲ್ಲವೆಂದೂ ನುಡಿದಿರುತ್ತಾರೆ. ಅನಂತರ ಮಾನ್ಯ ಎ.ಡಿ.ಪಿ.ಯವರ ಮರು ವಿಚಾರಣೆಯಲ್ಲಿ ತಮಗೆ ವರ್ತಮಾನ ಬಂದಾಗ ಅನಧಿಕೃತವಾಗಿ ಯಾರು ಅಬಕಾರಿ ವಸ್ತುಗಳನ್ನು ತರುತ್ತಿದ್ದಾರೆ ಎಂತಹ ವಸ್ತುಗಳನ್ನು ತರುತ್ತಿದ್ದಾರೆ ಅನ್ನುವುದು ಗೊತ್ತಿರಲಿಲ್ಲ. ಮತ್ತು ವಾರೆಂಟನ್ನು ಪಡೆದುಕೊಳ್ಳಲು ಅವಕಾಶವಿರಲಿಲ್ಲವೆಂದು ನುಡಿದಿರುತ್ತಾರೆ. ನಂತರ ಪಾಟಿ ಸವಾಲಿನಲ್ಲಿ ಈ ದೋಣಿಯನ್ನು ಬಿಟ್ಟರೆ ಬೇರೆ ಯಾವುದೇ ದೋಣಿಯನ್ನು ನಾವು ತಪಾಸಣೆ ಮಾಡಲಿಲ್ಲ. ವರ್ತಮಾನ ಬಂದ ನಂತರ ಸುಮಾರು 1.30 ತಾಸು ಸಮಯಾವಕಾಶ ತಮಗೆ ಇತ್ತು ಎನ್ನುವುದು ಸರಿಯಲ್ಲವೆಂದೂ, ರಾತ್ರಿ 8.00 ಗಂಟೆಗೆ ವರ್ತಮಾನ ಬಂದಿತ್ತು ಎನ್ನುವುದು ನಿಜವೆಂದೂ ನುಡಿದಿರುತ್ತಾರೆ.

12. **ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:** ಆರೋಪಿಯು ತಪ್ಪಿಸಿಕೊಳ್ಳಬಹುದೆಂಬ ಅಥವಾ ಮುದ್ದೆ ಮಾಲುಗಳನ್ನು ಪರಭಾರೆ ಮಾಡಬಹುದೆಂಬ ಅನುಮಾನವಿದ್ದಲ್ಲಿ ಅಂತಹ ಪ್ರಕರಣಗಳಲ್ಲಿ ಜಪ್ತಿ ವಾರೆಂಟ್ ಇಲ್ಲದೇ ಶೋಧನೆಗೈಯ್ಯಲು ಅನ್ವೇಷಣಾಧಿಕಾರಿಗಳಿಗೆ ಕ.ಅ. ಕಾಯ್ದೆ 1965ರ ಕಲಂ 54ರಂತೆ ಅಧಿಕಾರವಿರುತ್ತದೆ. ಜಪ್ತಿ ವಾರೆಂಟ್‌ನ್ನು ಪಡೆದುಕೊಳ್ಳದಿದ್ದುದು ಫಿರ್ಯಾದುದಾರರು ಕ.ಅ.ಕಾಯ್ದೆ ಕಲಂ 52 ಮತ್ತು 54ರ ಉಲ್ಲಂಘನೆಯಾಗುತ್ತದೆಯೇ ಹೊರತು ಇದೇ ಕಾರಣವನ್ನಿಟ್ಟುಕೊಂಡು ಜಪ್ತಿಯನ್ನು ನಿರಾಕರಿಸಲು ಬರಲಾರದು ಈ ಬಗ್ಗೆ ಮಾನ್ಯ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠದ ತೀರ್ಪು ಐಎಲ್ಆರ್ 2004 ಕೆಎಆರ್ 527 (ಶ್ರೀ ಸೋಮನಾಥ ಕರೇಬೈಲ್ ವಿರುದ್ಧ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ) ರಲ್ಲಿ ಈ ಕೆಳಗಿನಂತೆ ಉಲ್ಲೇಖಿಸಲಾಗಿದೆ.

"In the Case of a search of a vessel, raft, vehicle or animal, the offender will undoubtedly have the opportunity to escape if the officer proposing to conduct the search were to approach a Magistrate to obtain a search warrant before actually conducting the search. That is so, particularly when illicit transport of excisable goods more often than not takes place at odd hours of the day and night to avoid detection, Such offenders are nabbed in the course of routine checks or on the basis of source information received by the excise authorities. To say that a search of a vehicle. Vessel, raft or animal can be conducted only after obtaining a warrant may therefore be unrealistic and may potentially defeat the very object underlying the excise legislation. That is because in the case of excisable goods that are in a state of motion, any delay which is implicit in an attempt to get a search warrant will give the Offender the opportunity to escape or destroy the evidence regarding the offence.

Failure to record in black and white what is obvious may not therefore by itself constitute an illegality so as to render the search or the subsequent proceedings based on the same illegal. Such failure may be only procedural irregularity not affecting the validity of the search. The seizure of the goods while the same were in motion or were capable of being put into motion should sufficiently satisfy the conscience of the law that no prejudice on account of non recording of the reasons for not obtaining warrant has been caused".

ಖಚಿತವಾದ ವರ್ತಮಾನದ ಮೂಲಕ ಫಿರ್ಯಾದಿ ಕಡೆಯವರು ಸಂಬಂಧಪಟ್ಟ ದೋಣಿಯನ್ನೇ ತಪಾಸಿಸಿ ಹಿಡಿದು ತಂದಿದ್ದರಿಂದ ಬೇರೆ ದೋಣಿಗಳನ್ನು ತಪಾಸಿಸುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಅಲ್ಲದೇ ಆ ಸಮಯದಲ್ಲಿ ಇದೊಂದೆ ದೋಣಿ ಬಂದ ಬಗ್ಗೆ ಫಿರ್ಯಾದುದಾರರು ನುಡಿದಿದ್ದು ದೋಣಿಯ ಮಶೀನು 9 ಹೆಚ್.ಪಿ. ಇದ್ದದ್ದಾದಲ್ಲಿ ಅರ್ಜಿದಾರರು ದೋಣಿಯ ಹಾಗೂ ಮಶೀನಿನ ಮಧ್ಯಂತರ ವಶದ ಬಿಡುಗಡೆಯ ಬಗ್ಗೆ ಅರ್ಜಿ ಸಲ್ಲಿಸುವಾಗ 25 ಹೆಚ್.ಪಿ. ಎಂದು ಏಕೆ ನಮೂದಿಸಿದರು? ಅಲ್ಲದೇ ಈಗ ಫಿರ್ಯಾದಿ ಕಡೆಯವರ ತಾಬಾದಲ್ಲಿರುವ 25 ಹೆಚ್.ಪಿ. ಯುಳ್ಳ ಮಶೀನು ಹೇಗಾಯಿತು? ಎಂಬ ಬಗ್ಗೆ ಎದುರುದಾರರು ವಿವರಿಸಿರುವುದಿಲ್ಲ. ಆರೋಪಿಗಳು ಫಿರ್ಯಾದಿ ಕಡೆಯವರನ್ನು ಕಂಡು ನಾಡದೋಣಿಯನ್ನು ಹಿಂತಿರುಗಿಸಿ ಗೋವಾ ಕಡೆಗೆ ಹೋಗುತ್ತಿರುವಾಗ ತಮ್ಮ ಲಾಂಚಿನ ಸಹಾಯದಿಂದ ಸದ್ರಿ ದೋಣಿಯನ್ನು ಬೆನ್ನಟ್ಟಿ ಹಿಡಿದೆವೆಂದು ಪಂಚನಾಮೆಯಲ್ಲಿ

ನಮೂದಾಗಿರುತ್ತದೆ. ಅಬಕಾರಿ ಪ್ರಕರಣಕ್ಕೆ ಸಂಬಂಧಿಸಿದಂತೆ ಆರೋಪಿಗಳನ್ನು ಅಭಿಯೋಜನೆಗೆ ಒಳಪಡಿಸಿರಲಿ ಅಥವಾ ಇಲ್ಲದಿರಲಿ ಅಂತಹ ಪ್ರಕರಣದಲ್ಲಿ ಒಳಗೊಂಡಂತಹ ಸ್ವತ್ತುಗಳನ್ನು ಕ.ಅ. ಕಾಯ್ದೆ 1965ರ ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದಿದೆ. ಅಲ್ಲದೇ ಕ್ರಿಮಿನಲ್ ನ್ಯಾಯಾಲಯದಲ್ಲಿ ಆರೋಪಿಯು ನಿರ್ದೋಷಿಯಾಗಿದ್ದಲ್ಲಿ ಅದನ್ನು ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲವೆಂದು ಈ ಬಗ್ಗೆ ಗೌರವಾನ್ವಿತ ಉಚ್ಚನ್ಯಾಯಾಲಯ ಬೆಂಗಳೂರು ರವರ ತೀರ್ಪು ಡಿ.ಎಸ್. ವಿಜಯ ಕುಮಾರ ವಿರುದ್ಧ ಡೆಪ್ಯೂಟಿ ಕನ್ಸರ್ವೇಟರ್ ಆಫ್ ಫಾರೆಸ್ಟ್, ಹಾಸನ (ಐಎಲ್ಆರ್-2002, ಕೆ.ಎ.ಆರ್. 1375) ನೇದರಲ್ಲಿಯೂ ಈ ಕೆಳಗಿನಂತೆ ತೀರ್ಪಾಗಿದೆ.

"The Contention of the owner of the seized vehicle that non-filing of a criminal case or acquittal of the accused involved in illegal transport of forest produce, takes away the jurisdiction of the Authorised Officers to initiate confiscation proceedings under section 71A, hence confirmed the order of confiscation".

ಜಪ್ತಿಯಾದ ಮುದ್ದೆ ಮಾಲಿಗೂ ಮತ್ತು ದೋಣಿಗೂ ಯಾವುದೇ ಸಂಬಂಧವಿರದಿದ್ದಲ್ಲಿ ಈ ಪ್ರಕರಣದಲ್ಲಿ ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ವಿಲೇವಾರಿ ಮಾಡಲಾದಂತಹ 375 ಮಿ.ಲೀ.ನ 3,120 ಗೋವಾ ಡಾಲರಿಚ್ ಎಂಬ ಹೆಸರಿನ ತೆಂಗಿನ ಸರಾಯಿಯ ಸೀಲ್ಡ್ ಬಾಟಲುಗಳನ್ನು ಫಿರ್ಯಾದಿ ಕಡೆಯವರು ಎಲ್ಲಿಂದ ತಂದರು? ಎನ್ನುವ ಬಗ್ಗೆ ಎದುರುದಾರರ ಪಕ್ಷದವರು ವಿವರಿಸಿಲ್ಲ. ವಾರಸುದಾರರಿಲ್ಲದ ಮುದ್ದೆ ಮಾಲನ್ನು ಸೇರಿಸಿ ಸುಳ್ಳು ಪ್ರಕರಣವನ್ನು ಇದೇ ಆರೋಪಿಗಳ ಮೇಲೆ ದಾಖಲಿಸಲು ಫಿರ್ಯಾದಿಯವರಿಗೂ ಮತ್ತು ಆರೋಪಿಗಳಿಗೂ ಇರುವಂತಹ ದ್ವೇಷ ಅಥವಾ ವೈಮನಸ್ಸು ಏನು ಎಂಬುವುದರ ಬಗ್ಗೆ ಎದುರುದಾರರ ಪಕ್ಷದವರು ವಿವರಿಸಿಲ್ಲ. ವರ್ತಮಾನ ಬಂದ ನಂತರ 1:30 ತಾಸುಗಳ ಅವಧಿಯನ್ನು ಸಿಬ್ಬಂದಿಗಳನ್ನು ಕರೆಯಿಸಲು, ಸಮವಸ್ತ್ರ ಧರಿಸಲು ಹಾಗೂ ಲಾಂಚನ್ನು ದಡದಿಂದ ನೀರಿಗೆ ತಂದು ಚಾಲನೆ ಮಾಡಲು ಬಳಸಿರಬಹುದಾಗಿದೆ.

13. ದಿನಾಂಕ: 09.10.2002ರಂದು ಈ ಪ್ರಕರಣದ ಪಂಚಸಾಕ್ಷಿ ನಂ. 1ನೇಯವರಾದ ಸಂತೋಷ ಮಂಗೇಶ ಪಾಲೇಕರ ಇವರು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿ.ಡಬ್ಲ್ಯೂ-2 ರಂತೆ ತಮ್ಮ ಸಾಕ್ಷಿಯನ್ನು ನುಡಿಯುತ್ತಾ, ಮಾನ್ಯ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಯಲ್ಲಿ ಪೊಲೀಸರು ತನ್ನನ್ನು ಕೂರ್ಮಗಡ ನಡುಗಡ್ಡೆಯ ಹತ್ತಿರ ಕರೆಯಿಸಿ ಆರೋಪಿತರ ತಾಬಾದಿಂದ ಸರಾಯಿ ಜಪ್ತು ಪಂಚನಾಮೆ ಮಾಡಿಲ್ಲ ಆದರೆ ಬರೆದಿದ್ದ ಪಂಚನಾಮೆಯಲ್ಲಿ ತನ್ನ ಸಹಿ ಪಡೆದಿದ್ದಾರೆಂದೂ, ಸದ್ರಿ ಪಂಚನಾಮೆಯನ್ನು ತಾನು ಈಗ ನೋಡುತ್ತಿದ್ದು ಅದನ್ನು ಈಗಾಗಲೇ ನಿಶಾನೆ ಪಿ-1 ಎಂದು ಗುರುತಿಸಲಾಗಿದ್ದು, ಅದರ ಮೇಲೆ ತಾನು ಮಾಡಿದ ಸಹಿಯನ್ನು ನಿಶಾನೆ ಪಿ-1-ಬಿ ಎಂದು ಈಗಾಗಲೇ ಗುರುತಿಸಲಾಗಿದೆಯೆಂದು ನುಡಿದಿರುತ್ತಾರೆ. ಅನಂತರ ಮಾನ್ಯ ಎ.ಡಿ.ಪಿ.ಯವರ ಪಾಟೀ ಸವಾಲಿನಲ್ಲಿ ತಾನು ಅರ್ಜಿದಾರರಿಗೆ ಸಹಾಯ ಮಾಡಲು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂಬುದು ಸರಿಯಲ್ಲವೆಂದು ತಾನು ಎಸ್.ಎಸ್.ಎಲ್.ಸಿ. ಯವರೆಗೆ ಓದಿದ್ದು ಇಂಗ್ಲೀಷ್‌ನಲ್ಲಿ ಸಹಿ ಮಾಡುತ್ತೇನೆಂದು ಪೊಲೀಸರು ಖಾಲಿ ಹಾಳೆಯ ಮೇಲೆ ತನ್ನ ಸಹಿಯನ್ನು ಪಡೆದುಕೊಂಡಿದ್ದರಿಂದ ಈ ಬಗ್ಗೆ ತಾನು ಪೊಲೀಸರ ಮೇಲಾಧಿಕಾರಿಗಳಿಗೆ ಯಾವುದೇ ದೂರು ನೀಡಿಲ್ಲವೆಂದು ನುಡಿದಿರುತ್ತಾರೆ. ನಂತರ ಅದೇ ದಿನ ಈ ಪ್ರಕರಣದ ಪಂಚಸಾಕ್ಷಿ ನಂ.2 ನೇ ಯವರಾದ ಶಂಕರದತ್ತಾ ತಾಮಸೆ ಇವರು ಮಾನ್ಯ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಯಲ್ಲಿ ಪೊಲೀಸರು ತನ್ನನ್ನು ಕೂರ್ಮಗಡ ನಡುಗಡ್ಡೆಯ ಹತ್ತಿರ ಕರೆಯಿಸಿ ಆರೋಪಿತರ ತಾಬಾದಿಂದ ಸರಾಯಿ ಜಪ್ತು ಪಂಚನಾಮೆ ಮಾಡಿಲ್ಲ ಆದರೆ ಬರೆದಿದ್ದ ಪಂಚನಾಮೆಯಲ್ಲಿ ತನ್ನ ಸಹಿ ಪಡೆದಿದ್ದಾರೆಂದೂ, ಸದ್ರಿ ಪಂಚನಾಮೆಯನ್ನು ತಾನು ಈಗ ನೋಡುತ್ತಿದ್ದು ಅದನ್ನು ಈಗಾಗಲೇ ನಿಶಾನೆ ಪಿ-1 ಎಂದು ಗುರುತಿಸಲಾಗಿದ್ದು, ಅದರ ಮೇಲೆ ತಾನು ಮಾಡಿದ ಸಹಿಯನ್ನು ನಿಶಾನೆ ಪಿ-1-ಸಿ ಎಂದು ಈಗಾಗಲೇ ಗುರುತಿಸಲಾಗಿದೆಯೆಂದು ನುಡಿದಿರುತ್ತಾರೆ. ನಂತರ ಪಾಟಿ ಸವಾಲಿನಲ್ಲಿ ತಾನು ಯಾವುದೇ ದಾಖಲೆಗೆ ಸಹಿ ಮಾಡುವ ಮೊದಲು ಓದಿ ನೋಡಿ ಸಹಿ ಮಾಡುತ್ತೇನೆಂದು ನಿಶಾನೆ ಪಿ-1ರಲ್ಲಿ ಇರುವ ಸಹಿ ತನ್ನದೇ ಆಗಿರುತ್ತದೆಂದೂ ನುಡಿದಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರ ಅಡ್ಡ ವಿಚಾರಣೆಯಲ್ಲಿ ಪೊಲೀಸರು ಏನು ಬರೆದಿದ್ದಾರೆ ಎನ್ನುವುದು ತನಗೆ ಗೊತ್ತಿಲ್ಲವೆಂದು ತಾನು ಅಂಗಡಿಗೆ ಚಹಾ ಕುಡಿಯಲು ಹೋದಾಗ ಸ್ವಲ್ಪ ಸಹಿ ಹಾಕಿ ಹೋಗು ಎಂದು ಹೇಳಿದರೆಂದು ತಾನು ಸಹಿ ಮಾಡುವಾಗ ಅದರಲ್ಲಿ ಏನೂ ಬರೆದಿರಲಿಲ್ಲವೆಂದು ಖಾಲಿ ಹಾಳೆಗೆ ತಾನು ಸಹಿ ಮಾಡಿದ್ದೇನೆಂದು ನುಡಿದಿರುತ್ತಾರೆ.

**14. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:** ಪಿ.ಡಬ್ಲ್ಯೂ-2 ಮತ್ತು 3ನೇಯವರುಗಳು ಮುಖ್ಯ ವಿಚಾರಣೆಯಲ್ಲಿ ಬರೆದಿಟ್ಟ ಪಂಚನಾಮೆಯಲ್ಲಿ ತಾವು ಸಹಿ ಮಾಡಿರುವುದಾಗಿ ನುಡಿದು ಪಾಟಿ ಸವಾಲಿನಲ್ಲಿ ಖಾಲಿ ಹಾಳೆಯಲ್ಲಿ ಸಹಿ ಮಾಡಿರುವುದಾಗಿ ತಿಳಿಸಿರುವುದರಿಂದ ಸದ್ರಿಯವರುಗಳ ಹೇಳಿಕೆಗಳು ಒಂದಕ್ಕೊಂದು ತಾಳೆಯಾಗದೇ ಇವರುಗಳು ಅರ್ಜಿದಾರರಿಗೆ ಸಹಾಯ ಮಾಡುವ ದೃಷ್ಟಿಯಿಂದ ಸುಳ್ಳು ಸಾಕ್ಷಿ ನುಡಿದಿರಬಹುದಾಗಿ ವ್ಯಕ್ತವಾಗುತ್ತದೆ. ಅಲ್ಲದೇ ಪಿ.ಡಬ್ಲ್ಯೂ-2 ನೇಯವರು ತನಗೆ ಓದು ಬರಹ ಬಂದುಕೊಂಡು ಸಹ ಖಾಲಿ ಹಾಳೆಯ ಮೇಲೆ ಏಕೆ ಸಹಿ ಮಾಡಿದ್ದೇನೆ ಎನ್ನುವ ಬಗ್ಗೆ ಸಮರ್ಪಕ ಉತ್ತರ ನೀಡಿಲ್ಲ ಅಲ್ಲದೇ ಪೊಲೀಸರು ಖಾಲಿ ಹಾಳೆಯ ಮೇಲೆ ಸಹಿ ಪಡೆದುಕೊಂಡ ಬಗ್ಗೆ ಅವರ ಮೇಲಾಧಿಕಾರಿಗಳಿಗೆ ಯಾವುದೇ ದೂರನ್ನು ಏಕೆ ನೀಡಿಲ್ಲವೆಂಬ ಬಗ್ಗೆ ಸಹ ವಿವರಿಸಿಲ್ಲ. ಹೀಗಾಗಿ ಇವರುಗಳು ನೀಡಿರುವ ಹೇಳಿಕೆಯು ಸಂಶಯಾಸ್ಪದವಾಗಿರುವುದರಿಂದ ಪಿ.ಡಬ್ಲ್ಯೂ-1ನೇಯವರ ಹೇಳಿಕೆಯ ಆಧಾರದ ಮೇಲೆ ಘಟನೆ ಸಂಭವಿಸಿರುವುದನ್ನು ಅಭಿಯೋಜನೆ ಪಕ್ಷದವರು ಪ್ರಾಧಿಕಾರದಲ್ಲಿ ನಿಸ್ಸಂಶಯವಾಗಿ ಸಾಬೀತುಪಡಿಸಿರುವುದು ಹಾಗೂ ಪಂಚನಾಮೆಯನ್ನು ರುಜುವಾತುಪಡಿಸಿ ಪುಷ್ಟೀಕರಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಹೀಗಾಗಿ 1ನೇಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸಲಾಗಿದೆ.

15. ಎದುರುದಾರರ ಪಕ್ಷದವರು ತನ್ನ ಪರ ಯಾವುದೇ ಸಾಕ್ಷಿಗಳನ್ನು ನುಡಿಸದಿರುವುದರಿಂದ ಹಾಗೂ ಆರೋಪಿಗಳಿಗಾಗಲೀ ಅರ್ಜಿದಾರರಾಗಲಿ ಜಾರಿ ಮಾಡಲಾಗಿರುವ ಕಾರಣಕೇಳಿ ನೋಟೀಸಿಗೆ ಸಮಜಾಯಿಷಿಯನ್ನು ಸಲ್ಲಿಸದಿರುವುದರಿಂದ ದೋಣಿ ಹಾಗೂ ಮಶೀನನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದರ ಬಗ್ಗೆ ಸಕಾರಾತ್ಮಕ ಭಾವನೆಯನ್ನು ಹೊಂದಿರುವುದು ವ್ಯಕ್ತವಾಗುತ್ತದೆ. ಹೀಗಾಗಿ ಘಟನೆ ಸಂಭವಿಸಿದ ದಿನದಂದು ದೋಣಿಯು ಯಾರ ವಶದಲ್ಲಿತ್ತೋ ಅವರುಗಳು ಮತ್ತು ಆ ದೋಣಿಯ ಮಾಲೀಕರು ಈ ಕೃತ್ಯವು ತಮ್ಮೆಲ್ಲರ ಗಮನಕ್ಕೆ ಬಾರದೇ ಮತ್ತು ತಾವುಗಳು ಶಾಮೀಲಾಗದೇ ಸಂಭವಿಸಿದೆ ಎಂಬುವುದನ್ನು ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಲು ವಿಫಲರಾಗಿರುವುದು ಕಂಡುಬರುತ್ತದೆ. ಹೀಗಾಗಿ 2-ನೇಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸಲಾಗಿದೆ.

16. ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಈ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ಮಶೀನು ಹೊಂದಿದ ದೋಣಿಯಲ್ಲಿ ಅಕ್ರಮವಾಗಿ ಫೆನ್ನಿಯನ್ನು ಸಾಗಿಸಿರುವುದು ಸಾಬೀತಾಗಿರುವುದರಿಂದ ಹಾಗೂ ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 62/2001 ದಿನಾಂಕ: 15.07.2004, ಕ್ರಿಮಿನಲ್ ಅಪೀಲ್ ಸಂಖ್ಯೆ: 183:2001 ದಿನಾಂಕ: 21.07.2004, 181/2001 ದಿನಾಂಕ:05.10.2004 ಮತ್ತು ಕ್ರಿಮಿನಲ್ ಅಪೀಲ್ ಸಂಖ್ಯೆ:121/2001 ದಿನಾಂಕ:26.11.2001ರಂತೆ ಈ ಪ್ರಾಧಿಕಾರದ ಆದೇಶವನ್ನು ಎತ್ತಿ

ಹಿಡಿದಿರುವುದರಿಂದ ಮೂರನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸುತ್ತಾ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ,

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಪ್ರಕಾರ ಅನುಸರಿಸಬೇಕಾದಂತಹ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43ಎ (1)ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಚಿತ್ತಾಕುಲಾ ಪೊಲೀಸ್ ಠಾಣೆಯ ಗುನ್ಹೆ ಸಂಖ್ಯೆ: 137/99 ದಿನಾಂಕ: 30.10.1999ರಲ್ಲಿ ಜಪ್ತಿಯಾದಂತಹ ಒಂದು ನಾಡದೋಣಿ ಅದರ ಉದ್ದ-33 ಪೂಟು, ಅಗಲ-5 ಪೂಟು, ಎತ್ತರ-2 ಪೂಟು, 5-ಇಂಚು, ದೋಣಿಯ ಮಧ್ಯದಲ್ಲಿ ಕುಳಿತುಕೊಳ್ಳಲು ಅನುಕೂಲವಾಗುವಂತಹ ಏಳು ಅಡ್ಡ ಹಲಗೆಗಳು, ಒಂದು ಎಂಕರ್ ಮತ್ತು ನೈಲಾನ್ ಹಗ್ಗ ಹಾಗೂ ಒಂದು ಜಪಾನ್ ತಯಾರಿಕೆಯ ಯಮಾಹ ಮಶೀನು ಸಂಖ್ಯೆ: ಯಮಾಹ/ ಇ125/ಎಫ್‌ಕೆ/6/ಎಲ್/311819 ಇವುಗಳನ್ನು ಕಲಂ 43ಎ(2)ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಆದೇಶಿಸಿದ್ದೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

(ಈ ಆದೇಶವನ್ನು ಇಂದು ಅಂದರೆ 2004ನೇ ಇಸ್ವಿಯ ನವೆಂಬರ್ ತಿಂಗಳ 30ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ ನಂತರ ಗಣಕೀಕೃತಗೊಳಿಸಿ, ಗಣಕೀಕೃತಗೊಳಿಸಿದ ಪ್ರತಿಯನ್ನು ತಿದ್ದಿದ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಎ.ಎಸ್. ವಿಶ್ವರೂಪ**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ-1**
**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

ಪ್ರಾ.ಸಾ.1 - ಜೆ.ಸಿ. ಲೀಲರಾಜ, ಪಿ.ಎಸ್.ಐ.
ಪ್ರಾ.ಸಾ.2 - ಸಂತೋಷ ಮಂಗೇಶ ಪಾಲೇಕರ್
ಪ್ರಾ.ಸಾ.3 - ಶಂಕರ ದತ್ತಾ ತಾಮಸೆ

**ಅನುಬಂಧ-2**
**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

- ಇಲ್ಲ -

**ಅನುಬಂಧ-3**
**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

ನಿಶಾನೆ ಪಿ1 : - ಮಹಜರ
ನಿಶಾನೆ ಪಿ1ಎ : - ಮಹಜರ ಮೇಲಿನ ಫಿರ್ಯಾದುದಾರರ ಸಹಿ
ನಿಶಾನೆ ಪಿ1ಬಿ : - ಮಹಜರ ಮೇಲಿನ ಪಂಚಸಾಕ್ಷಿದಾರ ನಂ.1ನೇಯವರ ಸಹಿ
ನಿಶಾನೆ ಪಿ1ಸಿ : - ಮಹಜರ ಮೇಲಿನ ಪಂಚಸಾಕ್ಷಿದಾರ ನಂ.2ನೇಯವರ ಸಹಿ
ನಿಶಾನೆ ಪಿ2 : - ಪ್ರ.ಮಾ. ವರದಿ

**ಅನುಬಂಧ-4**
**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

- ಇಲ್ಲ -

**ಎ.ಎಸ್. ವಿಶ್ವರೂಪ**
ಪಿ.ಆರ್. 1733
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಚಿತ್ರದುರ್ಗ, ಉಪವಿಭಾಗ, ಚಿತ್ರದುರ್ಗ**

**ನಮೂನೆ-10**

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಅಡಿಯಲ್ಲಿ ರೂಪಿಸಲಾಗಿರುವ ನಿಯಮಗಳನ್ವಯ 38ನೇ ರೂಲಿನ (7)ನೆಯ ಕಲಂ ಪ್ರಕಾರ ನೀಡಿರುವ "ಸೇಲ್ ಸರ್ಟಿಫಿಕೇಟ್".**

**ಹೆಸರು :** ಶ್ರೀ ಬಿ.ಟಿ. ಜಯರಾಮಪ್ಪ
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ.

**ಅಮಲ್ಜಾರಿ ಅರ್ಜಿ ಸಂಖ್ಯೆ: 15/ 2004-05**

| **ಡಿಕ್ರಿದಾರರು:** | **ವಿರುದ್ಧ** | **ಬಾಕಿದಾರರು:** |
|---|---|---|
| ವ್ಯವಸ್ಥಾಪಕರು<br>ಒನಕೆ ಓಬವ್ವ ಮಹಿಳಾ ಸಹಕಾರಿ ಬ್ಯಾಂಕ್ ನಿ.,<br>ಚಿತ್ರದುರ್ಗ. | | ಶ್ರೀಮತಿ ಬಿ.ಆರ್. ಜಯಶ್ರೀ ಕೋಂ ಜಿ. ನಿಂಗರಾಜಪ್ಪ,<br>ಬಸವಜ್ಯೋತಿ ನಿಲಯ, ಕೆ.ಹೆಚ್.ಬಿ. ಕಾಲೋನಿ, ಚಳ್ಳಕೆರೆ. |

ಈ ಮೂಲಕ ಧೃಢೀಕರಿಸುವುದೇನೆಂದರೆ, ಶ್ರೀ ಹೆಚ್. ವಿರುಪಾಕ್ಷಿ ಬಿನ್ ಹಂಪಣ್ಣ (ಜಾತಿ) ಪದ್ಮಸಾಲಿ (ಧರ್ಮ) ಹಿಂದೂ (ವೃತ್ತಿ) ವ್ಯಾಪಾರ (ವಾಸಸ್ಥಳ) ಎರಡನೇ ಕ್ರಾಸ್, ಸಂಗೊಳ್ಳಿ ರಾಯಣ್ಣ ರಸ್ತೆ, ಗಾಂಧಿನಗರ, ಚಳ್ಳಕೆರೆ ಟೌನ್, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರು ಮಾರಾಟಾಧಿಕಾರಿ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರು ನಡೆಸಿದ ಬಹಿರಂಗ ಹರಾಜಿನಲ್ಲಿ ಈ ಕೆಳಗೆ ತೋರಿಸಿದ ಸ್ಥಿರಸೊತ್ತುಗಳನ್ನು ಕೊಂಡಿದ್ದಾರೆ. ಸದರಿ ಸ್ಥಿರ ಸೊತ್ತುಗಳನ್ನು ಒನಕೆ ಓಬವ್ವ ಮಹಿಳಾ ಸಹಕಾರಿ ಬ್ಯಾಂಕ್ ನಿ., ಚಿತ್ರದುರ್ಗ ಇವರಿಗೆ ಶ್ರೀಮತಿ ಬಿ.ಆರ್. ಜಯಶ್ರೀ ಕೋಂ ಜಿ. ನಿಂಗರಾಜಪ್ಪ (ಜಾತಿ) ಲಿಂಗಾಯಿತರು (ಧರ್ಮ) ಹಿಂದೂ (ವೃತ್ತಿ) ಗೃಹಿಣಿ (ವಾಸಸ್ಥಳ) ಕೆ.ಹೆಚ್.ಬಿ. ಕಾಲೋನಿ, ಚಳ್ಳಕೆರೆ ಟೌನ್, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರಿಂದ ಬರಬೇಕಾದ ಬಾಕಿ ಮೊತ್ತಕ್ಕೆ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ್ಯ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ಡಿಕ್ರಿ/ ಅವಾರ್ಡ್/ ತೀರ್ಪು ಆದೇಶ ಸಂಖ್ಯೆ: 303/ 2003-04, ದಿನಾಂಕ: 28.07.2003ರ ರೀತ್ಯಾ ಅಮಲ್ಜಾರಿ ಕ್ರಮದಲ್ಲಿ ಹರಾಜು ಮಾಡಲಾಗಿ ಕೊಂಡ ಮೊತ್ತ ರೂ 10,35,000-00 (ಹತ್ತು ಲಕ್ಷದ ಮೂವತ್ತೈದು ಸಾವಿರ) ಗಳನ್ನು ಸಂಪೂರ್ಣವಾಗಿ ಪಾವತಿಯಾಗಿದ್ದು ನಾನು ದಿನಾಂಕ: 30.11.2004ರಂದು ಸದರಿ ಹರಾಜನ್ನು (ಮಾರಾಟವನ್ನು) ಖಾಯಂಗೊಳಿಸಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ.

**ಸ್ಥಿರ ಸೊತ್ತುಗಳ ಷೆಡ್ಯೂಲ್**

ನೊಂದಣಿ ಜಿಲ್ಲೆ : : ಚಿತ್ರದುರ್ಗ.
ನೊಂದಣಿ ತಾಲ್ಲೂಕು: : ಚಳ್ಳಕೆರೆ.
ಗ್ರಾಮ : ಕೆ.ಹೆಚ್.ಬಿ. ಕಾಲೋನಿ, ಚಳ್ಳಕೆರೆ.

**ಸ್ಥಿರ ಸೊತ್ತುಗಳ ವಿವರ (ಚಕ್ಕುಬಂದಿ)**

ಪೂರ್ವಕ್ಕೆ : ರಸ್ತೆ
ಪಶ್ಚಿಮಕ್ಕೆ : ಸೈಟ್ ನಂ.3
ಉತ್ತರಕ್ಕೆ : ಖಾಲಿ ನಿವೇಶನ
ದಕ್ಷಿಣಕ್ಕೆ : ರಸ್ತೆ
ಸೈಟ್ ನಂ.4 ಖಾತೆ ನಂ. ಹಳೆ ಖಾತೆ ಸಂಖ್ಯೆ: 2624/ಎ
ಹೊಸ ಖಾತೆ ಸಂಖ್ಯೆ: 1897/ 1959/ ಎ/ 2624/ ಎ
ವಿಸ್ತೀರ್ಣ 30x36 ಅಡಿಗಳು
ಹೆಸರು : ಜಿ. ನಿಂಗರಾಜಪ್ಪ
ಮಾರಾಟದ ಬೆಲೆ (ಪ್ರತಿ ಲಾಟ್‌ಗೆ) : ರೂ. 10,35,000-00 (ಹತ್ತು ಲಕ್ಷದ ಮೂವತ್ತೈದು ಸಾವಿರ ಮಾತ್ರ)
ಹರಾಜು ದಿನಾಂಕ : 19.07.2004

ನನ್ನ ಸಹಿ ಮತ್ತು ಮುದ್ರೆಯೊಂದಿಗೆ ದಿನಾಂಕ: 30.11.2004ರಲ್ಲಿ ನೀಡಲ್ಪಟ್ಟಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ.

**ಫಾರಂ ನಂ.11**

**(38ನೇ ರೂಲಿನ (7) ನೆಯ ಕಲಂ)**

**ಸ್ಥಿರ ಸೊತ್ತುಗಳನ್ನು ಕೊಂಡದ್ದಕ್ಕೆ ಪ್ರಕಟಣೆ**

ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ಚಳ್ಳಕೆರೆ ಟೌನ್ ಸಂಗೊಳ್ಳಿ ರಾಯಣ್ಣ ರಸ್ತೆ, ಗಾಂಧಿನಗರದಲ್ಲಿರುವ ಶ್ರೀ ಹೆಚ್. ವಿರುಪಾಕ್ಷಿ ಬಿನ್ ಹಂಪಣ್ಣ ಇವರು ಈ ಕೆಳಗೆ ತೋರಿಸಿದ ಸ್ಥಿರ ಸೊತ್ತುಗಳನ್ನು ಬಹಿರಂಗವಾಗಿ ಹರಾಜಿನಲ್ಲಿ 2004ನೇ ಇಸವಿ ಜುಲೈ ತಿಂಗಳ 19ನೇ ತಾರೀಖಿನಲ್ಲಿ ಕ್ರಯಕ್ಕೆ ಪಡೆದುಕೊಂಡಿದ್ದಾಗ್ಯೂ ಮತ್ತು ದರಖಾಸ್ತು ಹಣ ರೂ. 10,35,000-00 ಗಳನ್ನು ಸಂಪೂರ್ಣವಾಗಿ ಪಾವತಿ ಮಾಡಿದ್ದರಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದ ಪ್ರಯುಕ್ತ ಸದರಿ ಶ್ರೀ ಹೆಚ್. ವಿರೂಪಾಕ್ಷಿ ಬಿನ್ ಹಂಪಣ್ಣ ಇವರು ಉತ್ತರಾಧಿಕಾರರಾಗಿದ್ದಾರೆ ಎಂಬುದಾಗಿ ಈ ಮೂಲಕ ದೃಢಪಡಿಸೋಣವಾಗಿರುತ್ತದೆ.

| ಗ್ರಾಮ ಮತ್ತು ತಾಲ್ಲೂಕು | ಸ್ಥಿರ ಸೊತ್ತುಗಳ ವಿವರ | ಸೈಟ್ ನಂ. | ವಿವರ | | | ಷರಾ |
|---|---|---|---|---|---|---|
| | | | ಪೋಡು ನಂ. | ಖಾತೆದಾರರ ಹೆಸರು | ಅಂದಾಜು ವಿಸ್ತೀರ್ಣ | |
| ಚಳ್ಳಕೆರೆ ಟೌನ್ ಕೆ.ಹೆಚ್.ಬಿ. ಕಾಲೋನಿ ಚಳ್ಳಕೆರೆ | ಆರ್.ಸಿ.ಸಿ. ಮನೆ | 04 | ಖಾತೆ ನಂ. 1897/ 1959/ಎ/ 2624/ ಎ | ಜಿ. ನಿಂಗರಾಜಪ್ಪ | 30x36 ಅಡಿ | |

ಸ್ಥಳ: ಚಿತ್ರದುರ್ಗ.
ದಿನಾಂಕ: 30.11.2004

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ.

ಪಿ.ಆರ್. 1734

## UNIVERSITY OF AGRICULTURAL SCIENCES, BANGALORE
## Administrative Office, GKVK, Bangalore-560 065
## NOTIFICATION
### No. AO/ RT/ 11/29/ 2004-05, Bangalore, Dated: 13th December, 2004

**Sub:** Recruitment of teaching Posts in the University of Agricultural Sciences, Bangalore.

Applications are invited in the prescribed form from the Candidates who are qualified as on the last date prescribed for receipt of filled in applications for filling up of the following teaching posts in the University of Agricultural Sciences, Bangalore.

Roster application is as per-

1. G.O. No.ಸಿಆಸುಇ 08 ಸೆಹಿಮ 95 Dated: 20.06.1995.
2. G.O. No. DPAR 11 SBC 94 Dated: 22.02.1994.
3. G.O. No.ಸಿಆಸುಇ 97 ಸೆನೆನಿ 2002 Dated: 22.11.2002.

**I. Associate Professor cadre posts (ICAR Schemes & KVKs):**
**Scale of Pay: Rs. 12000-420-18300**

| Sl. No. | Subject | No. of Schemes | Posts KVKs | Roster |
|---|---|---|---|---|
| 1. | Agril. Entomology | 2 | 9 | Current-17 Posts:<br>SC-3 (W-1, R.C.-1),<br>ST-1, IIA-3 (W-1, R.C.-1)<br>III A-1, IIIB-1,<br>GM-8 (W-3, R.C.-2) |
| 2. | Plant Pathology | 2 | | |
| 3. | Soil Science & Agril. Chemistry | 1 | | |
| 4. | Genetics & Plant Breeding | 3 | | |
| 5. | Training Organisers-Multi discipline in the field of Agriculture/ Horticulture/ Animal Sciences/ Fishery Sciences. | | | |
| | | 8 | 9 | |

**II. Assistant Professor Cadre Posts (ICAR Schemes):**
**Scale of Pay: Rs. 8000-275-13500**

| Sl.No. | Subject | No.of Posts | Roster |
|---|---|---|---|
| 1. | Agronomy | 1 | Current:1 post: GM |
| 2. | Soil Science & Agril. Chemistry | 1 | Current:1 Post: GM |
| 3. | Genetics & Plant Breeding | 3 | Current:3 Posts. IIB-1, GM-2 (W-1) |
| 4. | Agril. Economics | 1 | 1 Current: 1 post: Cat.I. |
| | | 6 | |

**Note:** (W)-Women, (R.C.)- Rural Candidate.

**Qualifications:**

**I. For Associate Professor Cadre posts:**

1. A Ph.D. Degree in the concerned subject.
2. Good academic record with a Doctoral Degree or equivalent published work. In addition to these, candidates who join from outside University system, shall also possess atleast 55% of the marks or an equivalent grade of B in the seven point scale with letter grades O, A, B, C, D, E & F at the Master's degree level.
3. Five years of experience of teaching and/ or research excluding the periods spent for obtaining the research degree and as made some mark in the areas of Scholarship as evidenced by quality of publication, contribution to educational innovation, design of new courses and curricula.

**II. For Assistant Professor Cadre Posts:**

Good academic record with atleast 55% of the marks or, an equivalent grade of B in 7 point scale with letter grades O, A, B, C, D, E & F at the Master's degree level, in the relevant subject from an Indian University, or an equivalent degree from a Foreign University.

Besides fulfilling the above qualifications, candidates should have cleared the National Eligibility Test (NET) for Assistant Professors conducted by the UGC, CSIR or similar test accradited by the UGC.

**Note:**

1. A relaxation of 5% may be provided from 55% to 50% of the marks at the Master's level for the SC/ ST category.

2. A relaxation of 5% may be provided from 55% to 50% of the marks to the Ph. D. degree holders who have passed their Master's degree prior to 19th September, 1991.
3. B in the 7 point scale with letter grade O,A, B, C, D, E & F shall be regarded as equivalent of 55% wherever the grading system is followed. The details of conversion on 7 point scale into percentage equivalent is as under:

**Seven Point Scale**

| Grade | Grade Point | Percentage Equivalent |
|---|---|---|
| 'O'- Outstanding | 5.50-6.00 | 75- 100 |
| 'A'=Very Good | 4.50-5.49 | 65-74 |
| 'B'= Good | 3.50-4.49 | 55-64 |
| 'C'=Average | 2.50-3.49 | 45-54 |
| 'D'=Below Average | 1.50-2.49 | 35-44 |
| 'E'=Poor | 0.50-1.49 | 25-34 |
| 'F'= Fail | 0-0.49 | 0-25 |

4. The minimum requirement of 55% shall not be insisted upon for Professor/ Associate Professor/ Assistant Professor and Deputy Director of Student Welfare, for the existing incumbents who are also already in the University system. However, these marks should be insisted upon for those entering the system from outside and those at the entry point of Assistant Professor.
5. NET shall remain the compulsory requirement for appointment as Assistant Professor even for candidates having Ph.D. Degree. However, the candidates who have completed M.Phil. Degree by 31st December, 1993 or have submitted Ph.D. thesis to the University in the concerned subject on or before 31st December, 2002 are exempted from appearing in the NET examination. In case such candidates fail to obtain Ph.D. Degree, they shall have to pass the NET examination.
6. A relaxation of the minimum marks at the PG level from 55% to 50% for appointment as Assistant Professor may be provided to the candidates who have cleared the JRF examination conducted by UGC/ CSIR only, prior to 1989, when the minimum marks required to appear for JRD exam were 50%.
7. The Ph.D. should continue to be a compulsory requirement for the designation of Professor and Associate Professor.
8. For all faculties position in the Veterinary Science, the candidates must possess recognised Veterinary qualification included in the first or II Schedule to Indian Veterinary Council/ Veterinary Council of India.

**Instructions:**

1. **Application Fee:**
   For Associated Professor cadre posts: Rs.300/-(Rs.150/-for SC/STs.)
   For Assistant Professor cadre posts: Rs.200/- (Rs.100/-for SC/STs.)
   A xerox copy of the caste certificate issued by the competent authority should be submitted in support of claim for fee concession.
2. The candidates claiming for Rural Quota should enclose the certificate of study in rural areas (for 10 full academic years from 1st to 10th standards) issued by the competent authority.
3. The candidates claiming for having studied in Kannada Medium quota should enclose the certificate of study in Kannada (for 10 full academic years from 1st to 10th standards) issued by the competent authority.
4. Application forms along with the qualifications slip may be obtained from the undersigned after the publication of this notification in the News Paper, on payment of the prescribed fee in person either in the form of Crossed Postal Order/ Bank Demand Draft in favour of the Comptroller, University of Agricultural Sciences, GKVK, Bangalore-560 065. Postal Order/ Demand Draft purchased on or after the date of publication of this notification in the news paper only are accepted.
5. The candiates who studied under Trimester System and other than 10 point grading system are required to produce the equivalent percentage certificate obtained from the respective University.
6. The candidates have to enclose their pulished research papers, books and publications compulsorily to the applications. The research papers, books, reprints etc. not enclosed to the applications will not be taken into consideration at the time of interview.

7. A self addressed envelop of the size of 12" x 4", duly affixing postal stamp of the value of Rs.15/- should be sent if the application forms are required to be sent by post.
8. Ex-Servicemen or children of Defence Personnel killed or disabled in action are exempted from payment of application fee provided they produce the appropriate certificate in this behalf.
9. Separate applications are to be sent for each post.
10. The last date for issuing of the application forms is 20 days from the date of publication of this notification in the News papers.
11. Filled in applications together with the attested copies of testimonials should be sent so as to reach the undersigned on or before 30 days from the date of publication of this notification in the News Papers. The candidates staying abroad may apply on plain paper giving details of their bio-data enclosing copies of their educational certificates etc. as per Instructions at 4 above along with the prescribed fee in foreign currency.
12. All belated, incomplete applications and without payment of prescribed fee will be rejected.
13. The appointed candidates will be governed by the Statutes and Regulations of the University.
14. Number of vacancies notified under this notification is subject to alteration and the university reserves the right to fill in/ not to fill in any or all the vacancies notified.
15. Only attested copies of the certificates should be enclosed along with the applications.

By Order,

PD-83 Administrative Officer, GKVK, Bangalore.

**ಕಂದಾಯ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಕಂಇ 524 ಮುನೋಮು 2004, ಬೆಂಗಳೂರು, 2ನೇ ಡಿಸೆಂಬರ್, 2004**

ಕರ್ನಾಟಕ ನೋಂದಣಿ ಕಾಯ್ದೆ 1908ರ (ಕೇಂದ್ರೀಯ ಕಾಯ್ದೆ 1908ರ XVI)ರ ಕಲಂ 78ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೆ:ಜಿಇ ಇಂಡಿಯಾ ಟೆಕ್ನಾಲಜಿ ಸೆಂಟರ್ ಸಂಸ್ಥೆ, ಬೆಂಗಳೂರು ಇವರು ಬೆಂಗಳೂರಿನ ಇ.ಪಿ.ಐ.ಪಿ. ಕೈಗಾರಿಕಾ ಪ್ರದೇಶದಲ್ಲಿ ಸ್ಥಾಪಿಸಲಿರುವ ರಿಸರ್ಚ್ ಮತ್ತು ಡೆವಲಪ್‌ಮೆಂಟ್ ಸೆಂಟರ್ ಕುರಿತು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಇವರಿಂದ ಈ ಕೆಳಕಂಡ ಸರ್ವೆ ನಂಬರ್‌ಗಳಲ್ಲಿ ಹಂಚಿಕೆ ಮಾಡಿರುವ ಒಟ್ಟು 49.46 ಎಕರೆ ಜಮೀನಿನ ನೋಂದಣಿಗೆ ತಗಲುವ ನೋಂದಣಿ ಶುಲ್ಕದಲ್ಲಿ ಶೇ.100 ರಷ್ಟು ವಿನಾಯಿತಿ ನೀಡಲಾಗಿದೆ.

| ಕ್ರ. ಸಂ. | ಗ್ರಾಮದ ಹೆಸರು | ಸರ್ವೆ ನಂ. | ವಿಸ್ತೀರ್ಣ (ಎಕರೆಗಳಲ್ಲಿ) | ಒಟ್ಟು |
|---|---|---|---|---|
| 1. | ಹೂಡಿ | 152 (P) | 2.10 | |
| | | 199 (P) | 2.20 | |
| | | 200 (P) | 1.72 | |
| | | 201 (P) | 0.27 | |
| | | 204 (P) | 0.17 | |
| | | 205 (P) | 0,10 | |
| | | 206 (P) | 0.11 | |
| | | | | 6.67 |
| 2. | ಕುಂದಲಹಳ್ಳಿ | 29 (P) | 2.85 | |
| | | 30 (P) | 1.23 | |
| | | 31 (P) | 0.77 | |
| | | 32 (P) | 2.06 | |
| | | 33 (P) | 6.13 | |
| | | 34 (P) | 6.07 | |
| | | 35 | 4.80 | |
| | | | | 23.91 |
| 3. | ನಲ್ಲೂರಹಳ್ಳಿ | 79 (P) | 2.12 | |
| | | 80 (P) | 15.41 | |
| | | 81 (P) | 1.35 | |
| | | | | 18.88 |
| | | | ಒಟ್ಟು | 49.46 (200165.00ಚದರ ಮೀಟರ್) |

ಸದರಿ ಅಧಿಸೂಚನೆಯನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಪ್ರ.ಕಾ.ಆ.ಇ. 5509/04 ಮತ್ತು 5513/04, ದಿನಾಂಕ: 29.11.2004ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

**ಡಿ.ಎನ್. ಶ್ರೀಮುಖಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 1736

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-2, ಬಿಜಾಪುರ

**ಪ್ರಕರಣ ಸಂಖ್ಯೆ: ಕಾಅಬ: ಕಾನಪ:ಮಪ್ರ: ಎಸ್ಆರ್-200/2004, ದಿನಾಂಕ: 8ನೇ ಡಿಸೆಂಬರ್, 2004**

**ಅರ್ಜಿದಾರರು:**

1. ಸರುಬಾಯಿ ಅಲಿಯಾಸ್ ಶ್ರೀದೇವಿ ಗಂಡ ನಾಗೇಶ ಕೆಸರ್
2. ರೂಪಾಲಿ ತಂದೆ ನಾಗೇಶ ಕೆಸರ್
3. ಶ್ವೇತಾ ತಂದೆ ನಾಗೇಶ ಕೆಸರ್
4. ಕಾಂಜು ತಂದೆ ಮಾರುತಿ ಕೆಸರ್
5. ಮಹಾನಂದ ಗಂಡ ಕಂಟು ಕೆಸರ್
ವಾಸ: ಮುರಮ್,
ಈಗ ವಾಸ: ಕನ್ನುರ ತಾಲ್ಲೂಕು ಬಿಜಾಪುರ, ಜಿಲ್ಲೆ ಬಿಜಾಪುರ.

**ವಿರುದ್ಧ**

**ಪ್ರತಿವಾದಿಗಳು**

1. ಸುಧೀರ ತಂದೆ ಜನೆವನಪ್ಪ,
ವಾಸ:ದೇಶಪಾಂಡೆ ನಗರ, ಲಾತೋರ್-413512 (ಮಹಾರಾಷ್ಟ್ರ ರಾಜ್ಯ)
2. ಬ್ರಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ. ಲಿ., ಬಿಜಾಪುರ.

**ಪ್ರಕಟಣೆ**

ಶ್ರೀಮತಿ ಸರುಬಾಯಿ ಅಲಿಯಾಸ್ ಶ್ರೀದೇವಿ ಗಂಡ ನಾಗೇಶ ಕೆಸರ್ (2) ರೂಪಾಲಿ ತಂದೆ ನಾಗೇಶ ಕೆಸರ್ (3) ಶ್ವೇತಾ ತಂದೆ ನಾಗೇಶ ಕೆಸರ್ (4) ಕಂಟು ತಂದೆ ಮಾರುತಿ ಕೆಸರ್ (5) ಮಹಾನಂದ ಗಂಡ ಕಂಟು ಕೆಸರ್, ಇವರುಗಳಾದ ತಾವು ಮೃತ ನಾಗೇಶ ಕಂಟು ಕೆಸರ್ ಇವರ ಹೆಂಡತಿ, ಮಕ್ಕಳು ಮತ್ತು ತಂದೆ-ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ನಾಗೇಶ ಕಂಟು ಕೆಸರ್ ಇವರು ಒಂದನೇ ಪ್ರತಿವಾದಿಗಳಾದ ಸುಧೀರ ತಂದೆ ಜನೆವನಪ್ಪ ಇವರ ಜೀಪ್ ನಂ.ಎಂಹೆಚ್-24-ಎಫ್-0047ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು,
ಉಪವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್. 1737

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ

**ಸಂಖ್ಯೆ: ಕಾಪಕಾ: ಎಫ್:ಎಸ್ಆರ್: 52:2004**

**ಅರ್ಜಿದಾರರು:**

1. ಶ್ರೀಮತಿ ರಾಧಾಮಣಿ ಅಲಿಯಾಸ್ ರಾಧಮ್ಮ ಕೋಂ ಲಕ್ಷ್ಮಣ (ಲೇಟ್) 38 ವರ್ಷ ವಯಸ್ಸು.
2. ಕು. ವೀಣಾ ಬಿನ್ ಲೇಟ್ ಲಕ್ಷ್ಮಣ, 16 ವರ್ಷ ವಯಸ್ಸು.
3. ವಿನಯ್‌ಕುಮಾರ್ ಬಿನ್ ಲೇಟ್ ಲಕ್ಷ್ಮಣ, 15 ವರ್ಷ ವಯಸ್ಸು
ವಾಸ: ಹೊಳೆಬೀದಿ, ಬೇಲೂರು ಟೌನ್, ಬೇಲೂರು.

**ವಿರುದ್ಧ**

**ಪ್ರತಿವಾದಿಗಳು**

1. ಶ್ರೀ ಎಸ್. ಸ್ವಾಮಿ ಬಿನ್ ಸಿದ್ದಪ್ಪಶೆಟ್ಟಿ, ಕೆಎ-19-ಎ-3659ರ ಲಾರಿ ಮಾಲೀಕರು, ಲಕ್ಷ್ಮಿಪುರ ಬಡಾವಣೆ, ಬೇಲೂರು ಟೌನ್.
2. ಶಾಖಾ ವ್ಯವಸ್ಥಾಪಕರು, ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪೆನಿ ಲಿಮಿಟೆಡ್, ಕರಂಗಲಪಾಡಿ, ಮಂಗಳೂರು.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಲಕ್ಷ್ಮಣ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 05.06.2004ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ಅವಲಂಬಿತರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಎನ್. ರಾಮಕೃಷ್ಣ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

ಪಿ.ಆರ್. 1738

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-2 ಬಿಜಾಪುರ

**ಪ್ರಕರಣ ಸಂಖ್ಯೆ: ಕಾಅಬ: ಕಾನಪ:ಮಪ್ರ: ಎಸ್‌ಆರ್-205/2004, ದಿನಾಂಕ: 9ನೇ ಡಿಸೆಂಬರ್, 2004**

**ಅರ್ಜಿದಾರರು:**

1. ಜಾನಪ್ಪ ತಂದೆ ಶರಣಪ್ಪ ಶಿವನಗಿ
2. ಶ್ರೀಮತಿ ನಿಂಗವ್ವ ಗಂಡ ಜಾನಪ್ಪ ಶಿವನಗಿ
3. ಶ್ರೀಮತಿ ರುಕ್ಮವ್ವ ಗಂಡ ರೇವಣಸಿದ್ದಪ್ಪ ಶಿವನಗಿ
4. ಅಶೋಕ ತಂದೆ ಜಾನಪ್ಪ ಶಿವನಗಿ
5. ಕುಮಾರಿ ರೇಣುಕಾ ತಂದೆ ಜಾನಪ್ಪ ಶಿವನಗಿ
6. ಕುಮಾರಿ ರುಕಮಿಣಿ ತಂದೆ ಜಾನಪ್ಪ ಶಿವನಗಿ
   ವಾಸ: ಐನಾಪುರ, ತಾಲ್ಲೂಕು:ಜಿಲ್ಲೆ: ಬಿಜಾಪುರ.

**ವಿರುದ್ಧ**

**ಪ್ರತಿವಾದಿಗಳು**

1. ಲಾರ್ಸನ್ ಆ್ಯಂಡ್ ಟೂಬ್ರೊ ಲಿಮಿಟೆಡ್, ಇದರ ಪ್ರತಿನಿಧಿ ಕೆ. ಜಯಪ್ರಕಾಶ್, ಅಸಿಸ್ಟೆಂಟ್ ಮ್ಯಾನೇಜರ್ ಅಕೌಂಟೆಂಟ್ ಇಸಿಸಿ. ಡಿವಿಜನ್ (ಇಂಜಿನೀಯರಿಂಗ್ ಕನ್ಸ್‌ಟ್ರಕ್ಷನ್ ಆ್ಯಂಡ್ ಕಂಟ್ರಾಕ್ಟರ್) ಶಶಿನಾಗ ಅಪಾರ್ಟ್‌ಮೆಂಟ್ಸ್ ಹುಡ್ಕೊ ಕಾಲೋನಿ, ವಿವೇಕನಗರ, ಬಿಜಾಪುರ.
2. ರೀಜನಲ್ ಆಫೀಸರ್ಸ್, ಲಾರ್ಸನ್ ಆ್ಯಂಡ್ ಟೂಬ್ರೊ ಲಿಮಿಟೆಡ್ 19ನೇ ಕುಮಾರ ಕೃಪಾ ರೋಡ್, 1 ಮತ್ತು 2ನೇ ಮಹಡಿ, ಬೆಂಗಳೂರು-560 001.

**ಪ್ರಕಟಣೆ**

ಶ್ರೀ: ಶ್ರೀಮತಿ (1) ಜಾನಪ್ಪ ತಂದೆ ಶರಣಪ್ಪ ಶಿವನಗಿ, (2) ಶ್ರೀಮತಿ ನಿಂಗವ್ವ ಗಂಡ ಜಾನಪ್ಪ ಶಿವನಗಿ (3) ಶ್ರೀಮತಿ ರುಕ್ಮವ್ವ ಗಂಡ ರೇವಣಸಿದ್ದಪ್ಪ ಶಿವನಗಿ, (4) ಅಶೋಕ ತಂದೆ ಜಾನಪ್ಪ ಶಿವನಗಿ, (5) ಕುಮಾರಿ ರೇಣುಕಾ ತಂದೆ ಜಾನಪ್ಪ ಶಿವನಗಿ, (6) ಕುಮಾರಿ ರುಕಮಿಣಿ, ಇವರುಗಳಾದ ತಾವು ಮೃತ ರೇವಣಸಿದ್ದ ತಂದೆ ಜಾನಪ್ಪ ಶಿವನಗಿ ಇವರ ತಂದೆ-ತಾಯಿ ಮತ್ತು ಹೆಂಡತಿ, ತಮ್ಮ-ತಂಗಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ರೇವಣಸಿದ್ದ ತಂದೆ ಜಾನಪ್ಪ ಶಿವನಗಿ ಇವರು ಒಂದನೇ ಪ್ರತಿವಾದಿಗಳಾದ ಲಾರ್ಸನ್ ಆ್ಯಂಡ್ ಟೂಬ್ರೊ ಲಿಮಿಟೆಡ್, ಬಿಜಾಪುರ ಇವರ ಕಂಪನಿಯಲ್ಲಿ ಲೇಬರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು,
ಉಪವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್. 1739

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-2, ಬಿಜಾಪುರ

**ಪ್ರಕರಣ ಸಂಖ್ಯೆ: ಕಾಅಬ: ಕಾನಪ:ಮಪ್ರ: ಎಸ್‌ಆರ್-202/2004, ದಿನಾಂಕ: 8ನೇ ಡಿಸೆಂಬರ್, 2004**

**ಅರ್ಜಿದಾರರು:**

1. ಮಲ್ಲಿಕಾರ್ಜುನ ದ್ಯಾವಪ್ಪ ರುದಗಿ
2. ಶಾರದಾ ಗಂಡ ಮಲ್ಲಿಕಾರ್ಜುನ ರುದಗಿ
   ವಾಸ: ರೊನಿಹಾಳ,
   ತಾಲ್ಲೂಕು: ಬಿ. ಬಾಗೇವಾಡಿ, ಜಿಲ್ಲೆ: ಬಿಜಾಪುರ.

**ವಿರುದ್ಧ**

**ಪ್ರತಿವಾದಿಗಳು**

1. ಮಹಮ್ಮದ ಜಾಫರ್‌ಸಾಬ್ ತಂದೆ ಹಸನಸಾಬಿ
   ವಾಸ: ಮಹಬೂಬ ಕಾಲೋನಿ, ಸಿಂಧನೂರು,
   ಜಿಲ್ಲೆ: ರಾಯಚೂರು.
2. ಬ್ರಾಂಚ್ ಮ್ಯಾನೇಜರ್,
   ದಿ ಓರಿಯಂಟಲ್ ಇನ್ಶೂರೆನ್ಸ್ ಕಂ.ಲಿ., ಬಿಜಾಪುರ.

**ಪ್ರಕಟಣೆ**

ಶ್ರೀ: ಶ್ರೀಮತಿ (1) ಮಲ್ಲಿಕಾರ್ಜುನ ದ್ಯಾವಪ್ಪ ರುದಗಿ (2) ಶಾರದಾ ಗಂಡ ಮಲ್ಲಿಕಾರ್ಜುನ ರುದಗಿ, ವಾಸ: ರೊನಿಹಾಳ, ತಾಲ್ಲೂಕು: ಬಿ.ಬಾಗೇವಾಡಿ ಜಿಲ್ಲೆ: ಬಿಜಾಪುರ ಇವರುಗಳಾದ ತಾವು ಮೃತ ಬಸವರಾಜ ಮಲ್ಲಿಕಾರ್ಜುನ ರುದಗಿ ಇವರ ತಂದೆ-ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಬಸವರಾಜ ಮಲ್ಲಿಕಾರ್ಜುನ ರುದಗಿ ಇವರು ಒಂದನೇ ಪ್ರತಿವಾದಿಗಳಾದ ಮಹಮ್ಮದ್ ಜಾಫರ್‌ಸಾಬ್ ತಂದೆ ಹಸನಸಾಬ್ ಇವರ ಟ್ರಕ್ ನಂ.ಕೆಎ-26:2161 ರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು,
ಉಪವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್. 1740

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡುವಳಿಗಳು

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಕಾಡಜಕ್ಕಸಂದ್ರ ಗ್ರಾಮದಲ್ಲಿ ಗ್ರೇ ಗ್ರಾನೈಟ್‌ಗಾಗಿ ಮೆ. ಲಲಿತಾಂಬ ಎಂಟರ್ ಪ್ರೈಸಸ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 565ರ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ.

**ಉಲ್ಲೇಖ :** 1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ: ಡಿಸಿಬಿ: ಕಗಗು:565: 2004-05: 3126 ದಿನಾಂಕ: 20.09.2004.

2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ: ಉನಿಕ:ಡಿಸಿಬಿ: ಕಗಗು: 565: 2004-05: 8406 ದಿನಾಂಕ: 16.10.2004.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಕಾಡಜಕ್ಕಸಂದ್ರ ಗ್ರಾಮದ ಸರ್ವೆ ನಂ.69ರಲ್ಲಿ ಮೆ. ಲಲಿತಾಂಬ ಎಂಟರ್ ಪ್ರೈಸಸ್ ರವರಿಗೆ 5-00 ಎಕರೆಗೆ ದಿನಾಂಕ: 13.12.2002 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 565ರಲ್ಲಿ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರಗಳಂತೆ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ, 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 1,25,218/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1)ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418: ಎಂಆರ್‌ಸಿ 92, ದಿನಾಂಕ: 02.07.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಬೇಕಾಗಿರುತ್ತದೆ.

**ಆದೇಶ**

**ಸಂಖ್ಯೆ: ಗಭೂಇ:ಡಿ.ಸಿ.ಬಿ. ಕಗಗು 565:2004-05,13257, ದಿನಾಂಕ: 10ನೇ ಡಿಸೆಂಬರ್, 2004**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1)ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ ಕಾಡಜಕ್ಕಸಂದ್ರ ಗ್ರಾಮದ ಸರ್ವೆ ನಂ.69ರಲ್ಲಿ 5-00 ಎಕರೆಗೆ ಗ್ರೇ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 565ನ್ನು ಗುತ್ತಿಗೆ ನಿಷ್ಕ್ರಿಯವಾಗಿಟ್ಟಿರುವ ಕಾರಣ ಕಲ್ಲು ಗಣಿ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲಾಗಿದೆ.

ಪಿ.ಆರ್. 1741 ನಿರ್ದೇಶಕರು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ಸಂಖ್ಯೆ: ಎ3(ಬಿ1): ಅಮೊ:ಬೀಟೆ: ಮಹೇಂದ್ರ ಜೀಪು:696/2003-04, ದಿನಾಂಕ: 20ನೇ ನವೆಂಬರ್, 2004**

**ವಿಷಯ :** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಮಹೇಂದ್ರ ಜೀಪ್ ನೊಂದಣಿ ಸಂಖ್ಯೆ: ಎಂವೈಕೆ-696ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ :** 1. ವಲಯ ಅರಣ್ಯಾಧಿಕಾರಿ, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಇವರ ಪತ್ರದ ಸಂಖ್ಯೆ: 14: ವಅಅ:ಸಬೈ:ವಜೀ: ಅಮೊ/ 2003-04 ದಿನಾಂಕ: 24.04.2003.

2. ಕರ್ನಾಟಕ ರಾಜ್ಯ ಪತ್ರದ ದಿನಾಂಕ: 02.09.2004ರಲ್ಲಿ ಪ್ರಕಟವಾಗಿರುತ್ತದೆ ಮತ್ತು ಸಹ್ಯಾದ್ರಿ ಕನ್ನಡ ಸ್ಥಳೀಯ ದಿನಪತ್ರಿಕೆಯಲ್ಲಿ ದಿನಾಂಕ: 19.08.2004 ರಂದು ಪ್ರಕಟವಾಗಿರುತ್ತದೆ.

**ಪ್ರಕರಣದ ಹಿನ್ನೆಲೆ:**

ಸಕ್ರೆಬೈಲು ವನ್ಯಜೀವಿ ವಲಯದ, ಸಕ್ರೆಬೈಲು ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಗಳು ಇಲಾಖಾ ವಾಹನದಲ್ಲಿ ದಿನಾಂಕ: 23.04.2003ರಂದು ರಾಮಿನಕೊಪ್ಪ ಗಸ್ತು ಮಾಡುತ್ತಾ ಬರುವಾಗ, ರಾಮಿನಕೊಪ್ಪದಿಂದ ಹಾದುಹೋಗುವ ತುಂಗಾ ಮೇಲ್ದಂಡೆ ಯೋಜನೆಯ ಹೊಸ ಚಾನಲ್ ಏರಿಯಾ ಮೇಲೆ ಬಿಳಿ ಬಣ್ಣದ ಜೀಪು ಬರುತ್ತಿರುವುದನ್ನು ಕಂಡು, (ನೊಂದಣಿ ಸಂಖ್ಯೆ: ಎಂವೈಕೆ-696) ಅನುಮಾನಾಸ್ಪದವಾಗಿ ಸದರಿ ಜೀಪನ್ನು ನಿಲ್ಲಿಸಲು ಸೂಚಿಸಿದಾಗ, ಜೀಪಿನಲ್ಲಿದ್ದ ಆಸಾಮಿಗಳು ಇಲಾಖಾ ಜೀಪನ್ನು ಕಂಡು, ಜೀಪನ್ನು ಬಿಟ್ಟುಓಡಿ ಹೋಗಿದ್ದು, ಒಬ್ಬ ಆಸಾಮಿಯನ್ನು ದಸ್ತಗಿರಿ ಮಾಡಿರುತ್ತಾರೆ. ನಂತರ ಜೀಪನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ, ಅದರಲ್ಲಿ ಬೀಟೆ ತುಂಡುಗಳಿರುವುದನ್ನು ಕಂಡು, ವಾಹನ ಮತ್ತು ಬೀಟೆ ತುಂಡುಗಳನ್ನು ಸರ್ಕಾರದ ಪರ ಅಮಾನತ್ತುಪಡಿಸಿ, ಅರಣ್ಯ ಮೊಕದ್ದಮೆಯನ್ನು ದಾಖಲು ಮಾಡಿ, ದಸ್ತಗಿರಿ ಮಾಡಿದ ಆಸಾಮಿಯನ್ನು ನ್ಯಾಯಾಂಗ ವಶಕ್ಕೆ ನೀಡಿರುತ್ತಾರೆ. ತದನಂತರ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 62, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 144ರ ಪ್ರಕಾರ ಅರಣ್ಯ ಮೊಕದ್ದಮೆ ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ, ಬೀಟೆ ತುಂಡುಗಳ ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿ, ಕೋಲಾರ ರವರು ಈ ವಾಹನಕ್ಕೆ ಸಂಬಂಧಿಸಿದ ಬಿ ಎಕ್ಸ್‌ಟ್ರ್ಯಾಕ್ಟ್ ಕಡತ 2000ನೇ ಇಸ್ವಿ ಫೆಬ್ರವರಿ ಮಾಹೆಯಲ್ಲಿ ವಿದ್ಯುತ್ ಶಾರ್ಟ್‌ಸರ್ಕ್ಯೂಟ್‌ನಿಂದ ಸುಟ್ಟು ಹೋಗಿರುತ್ತದೆ ಎಂಬುದಾಗಿ 09.03.2004ರಂದು ವರದಿ ಮಾಡಿದ್ದಾರೆ.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ವಾರಸುದಾರರು ಯಾರಾದರೂ ಇದ್ದರೆ, ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಬೀಟೆ ತುಂಡುಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬ ಬಗ್ಗೆ, ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 02.09.2004ರಂದು ಮತ್ತು ಸಹ್ಯಾದ್ರಿ ಕನ್ನಡ ಸ್ಥಳೀಯ ದಿನಪತ್ರಿಕೆಯಲ್ಲಿ ದಿನಾಂಕ: 19.08.2004ರಂದು ಪ್ರಕಟಿಸಲಾಗಿರುತ್ತದೆ.

ವಾಹನದ ಮಾಲೀಕತ್ವವನ್ನು ದೃಢೀಕರಿಸಿ, ವಾಹನವನ್ನು ವಶಕ್ಕೆ ತೆಗೆದುಕೊಳ್ಳಲು ಸಾಕಷ್ಟು ಕಾಲಾವಕಾಶ ಕೊಟ್ಟರೂ ಯಾರೊಬ್ಬರು ವಶಕ್ಕೆ ಇದುವರೆಗೆ ಕೋರದಿರುವುದನ್ನು ನೋಡಿದರೆ ಈ ವಾಹನ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿ ಉಪಯೋಗಿಸಲ್ಪಟ್ಟ ವಾಹನವೆಂದು ದೃಢವಾಗುತ್ತದೆ. ವಾಹನದ ಮಾಲೀಕರು ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶ ನೀಡಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಮಹೀಂದ್ರ ಜೀಪ್ ನೊಂದಣಿ ಸಂಖ್ಯೆ: ಎಂವೈಕೆ-696 (ಎಂಜೀನ್ ಸಂಖ್ಯೆ: ವಿಲ್ಲಿಸ್-4517046, ಛಾಸ್ಸಿ ಸಂಖ್ಯೆ: ಸಿಜೆ4-46397) ಮತ್ತು ಬೀಟೆ ತುಂಡುಗಳು 12=0.224 ಘ.ಮೀ. ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಬೀಟೆ ತುಂಡುಗಳು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 20.11.2004ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎ.ಎನ್. ಕರ್ಕೀಕರ್**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್. 1742

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ಸಂಖ್ಯೆ: ಎ3(ಬಿ1): ಅಮೊ: ಶ್ರೀಗಂಧ: ಸ್ಕೂಟರ್: 4439/ 2001-02, ದಿನಾಂಕ: 20ನೇ ನವೆಂಬರ್, 2004**

**ವಿಷಯ :** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಬಜಾಜ್ ಚೇತಕ್ ಸ್ಕೂಟರ್ ನೊಂದಣಿ ಸಂಖ್ಯೆ: ಕೆಎ-14-ಇ-4439ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ :**
1. ವಲಯ ಅರಣ್ಯಾಧಿಕಾರಿ, ಹಣಗೆರೆ ವನ್ಯಜೀವಿ ವಲಯ, ಸಿರಿಗೆರೆ ಇವರ ಪತ್ರದ ಸಂಖ್ಯೆ: ಹವಸಿ:307/2001-02 ದಿನಾಂಕ: 06.01.2002.
2. ಈ ಕಛೇರಿಯ ನ್ಯಾಯಾಲಯದಿಂದ ಹೊರಡಿಸಲಾದ ದಿನಾಂಕ: 07.01.2002ರ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 14.02.2002ರಲ್ಲಿ ಪ್ರಕಟವಾಗಿರುತ್ತದೆ.

**ಪ್ರಕರಣದ ಹಿನ್ನೆಲೆ:**

ಹಣಗೆರೆ ವನ್ಯಜೀವಿ ವಲಯದ, ಅರಸಾಳು ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಗಳು ಖಚಿತ ವರ್ತಮಾನದ ಮೇರೆಗೆ ದಿನಾಂಕ: 06.01.2002ರಂದು, ಬರುವೆ ಮನ್ನಾಜಂಗಲಿಯಲ್ಲಿ ಬರುವ ತೀರ್ಥಹಳ್ಳಿ- ರಿಪ್ಪನ್‌ಪೇಟೆ ಲೋಕೋಪಯೋಗಿ ರಸ್ತೆಯಲ್ಲಿ ಕಾಯುತ್ತಿದ್ದಾಗ, ಬೆಳಿಗ್ಗೆ ಸುಮಾರು 9.00 ಘಂಟೆಯ ಸಮಯದಲ್ಲಿ ಈ ಮಾರ್ಗವಾಗಿ ಬಜಾಜ್ ಸ್ಕೂಟರ್‌ನಲ್ಲಿ (ನೋಂದಣಿ ಸಂಖ್ಯೆ: ಕೆಎ-14-ಇ-4439) ಬಂದ ಆಸಾಮಿಗಳನ್ನು ತಡೆದು, ವಾಹನವನ್ನು ಪರಿಶೀಲಿಸಿ ನೋಡಿದಾಗ, 16.00 ಕೆ.ಜಿ. ಶ್ರೀಗಂಧ ತುಂಡು ಮತ್ತು ಚಕ್ಕೆಗಳನ್ನು ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿರುವುದನ್ನು ಕಂಡು, ಶ್ರೀಗಂಧ ತುಂಡುಗಳು, ಚಕ್ಕೆಗಳು ಹಾಗೂ ವಾಹನವನ್ನು ಸರ್ಕಾರಿ ಪರ ಅಮಾನತ್ತುಪಡಿಸಿ, ಅರಣ್ಯ ಮೊಕದ್ದಮೆ ದಾಖಲು ಮಾಡಿ, ಅಕ್ರಮ ಸಾಗಾಣಿಕೆಗೆ ಯತ್ನಿಸಿದ ಆಸಾಮಿಗಳನ್ನು ನ್ಯಾಯಾಂಗ ವಶಕ್ಕೆ ನೀಡಿರುತ್ತಾರೆ. ತದನಂತರ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 86, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 144ರ ಪ್ರಕಾರ ತಕ್ಷೀರು ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ, ಶ್ರೀಗಂಧದ ತುಂಡು ಮತ್ತು ಚಕ್ಕೆ ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ವಾರಸುದಾರರು ಯಾರಾದರೂ ಇದ್ದರೆ, ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಶ್ರೀಗಂಧದ ತುಂಡುಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬ ಬಗ್ಗೆ, ತಿಳುವಳಿಕೆ ಪತ್ರವನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 14.02.2002ರಲ್ಲಿ ಪ್ರಕಟಿಸಲಾಗಿರುತ್ತದೆ.

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರು ನೀಡಿದ ಬಿ ಎಕ್ಸ್‌ಟ್ರ್ಯಾಕ್ಟ್ ಪ್ರಕಾರ ವಾಹನದ ಮೂಲ ಖರೀದಿದಾರರಿಗೆ, ವಾಹನದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವ ಸಂಬಂಧ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಸೂಕ್ತ ಸಮಜಾಯಿಷಿ ನೀಡಲು ನೋಟೀಸ್ ನೀಡಲಾಗಿರುತ್ತದೆ. ಈ ನೋಟೀಸ್‌ಗೆ ಮೂಲ ಖರೀದಿದಾರರು ಸದರಿ ವಾಹನವನ್ನು ಮಾರಾಟ ಮಾಡಿರುವುದಾಗಿ ತಿಳಿಸುತ್ತಾ, ವಾಹನ ಪಡೆದ ವ್ಯಕ್ತಿಯ ವಿಳಾಸವನ್ನು ನೀಡಿರುತ್ತಾರೆ. ವಿಳಾಸ ನೀಡಿದ ವ್ಯಕ್ತಿಗೆ ನೊಂದಾಯಿತ ಅಂಚೆ ಮೂಲಕ ದಿನಾಂಕ: 20.08.2002, 08.12.2003 ಮತ್ತು 20.02.2004ರಂದು ನೋಟೀಸ್ ನೀಡಲಾಗಿರುತ್ತದೆ. ಸದರಿ ನೋಟೀಸುಗಳು ಸ್ವೀಕೃತಗೊಳ್ಳದೇ ವಾಪಾಸ್ ಬಂದಿರುತ್ತವೆ. ಸಾಕಷ್ಟು ಕಾಲಾವಕಾಶ ಕೊಟ್ಟರೂ, ಸದರಿ ವಾಹನದ ಬಗ್ಗೆ ತಮ್ಮ ಮಾಲೀಕತ್ವವನ್ನು ದೃಢೀಕರಿಸಿ ವಾಹನವನ್ನು ವಶಕ್ಕೆ ಇದುವರೆಗೆ ಕೋರದೇ ಇರುವುದನ್ನು ನೋಡಿದರೆ ಈ ವಾಹನ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿ, ಉಪಯೋಗಿಸಲ್ಪಟ್ಟಂತಹ ವಾಹನವೆಂದು ದೃಢವಾಗುತ್ತದೆ. ವಾಹನದ ಮಾಲೀಕರು ಮಾಲೀಕತ್ವದ ಬಗ್ಗೆ, ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲವೆಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ, ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್ ನೊಂದಣಿ ಸಂಖ್ಯೆ: ಕೆಎ-14-ಇ-4439 (ಎಂಜಿನ್ ಸಂಖ್ಯೆ: ಎಂ06ಸಿಬಿ090120, ಛಾಸ್ಸಿಸ್ ಸಂಖ್ಯೆ: ಎಫ್06ಸಿಬಿ087146) ಮತ್ತು ಶ್ರೀಗಂಧದ ತುಂಡುಗಳು ಮತ್ತು ಚಕ್ಕೆ 16.00 ಕೆ.ಜಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ

ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧದ ತುಂಡುಗಳು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 20.11.2004ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎ.ಎನ್. ಕರ್ಕೀಕರ್**

ಪಿ.ಆರ್. 1743

ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ.

## ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ

### ಅಧಿಸೂಚನೆ

**ಸಂಖ್ಯೆ: ವಾಪ್ರಯು 78 ವಾಪ್ರಸಿ 99, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್, 2004**

ಕರ್ನಾಟಕ ಲೋಕಸೇವಾ ಆಯೋಗದಿಂದ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ (ನೇರ ನೇಮಕಾತಿ ಮೂಲಕ ಆಯ್ಕೆ) ನಿಯಮಗಳು 1973ರ ಮೇರೆಗೆ ಆಯ್ಕೆಯಾದ ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧ-1ರಲ್ಲಿ ನೀಡಿರುವ 13 ಅಭ್ಯರ್ಥಿಗಳನ್ನು ವಾರ್ತಾ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರು ಹಾಗೂ ಜಿಲ್ಲಾ ವಾರ್ತಾಧಿಕಾರಿಗಳ ಹುದ್ದೆಗೆ ರೂ.5575-10620ರ ವೇತನ ಶ್ರೇಣಿಯಲ್ಲಿ ಪ್ರೊಬೇಷನರಿ ಅಧಿಕಾರಿಗಳಾಗಿ ನೇಮಕಾತಿ ಮಾಡಲಾಗಿದೆ.

ಇವರ ನೇಮಕಾತಿ ಕೇವಲ ತಾತ್ಕಾಲಿಕವಾದುದರಿಂದ ಒಂದು ತಿಂಗಳ ಸೂಚನಾ ಪತ್ರ ನೀಡುವ ಮೂಲಕ ಅವರನ್ನು ಕೆಲಸದಿಂದ ವಿಮುಕ್ತಿ ಮಾಡಲು ಅವಕಾಶವಿದೆ. ಎರಡು ವರ್ಷಗಳ ಅವಧಿಯವರೆಗೆ ಅವರು ಪ್ರೊಬೇಷನರ್‌ಗಳಾಗಿರುವರು. ಅವರು ಪ್ರೊಬೇಷನರಿ ಅವಧಿಯಲ್ಲಿ ಕನ್ನಡ ಭಾಷೆ ಮತ್ತು ಈ ಕೆಳಗೆ ಕಾಣಿಸಿದ ಇನ್ನಿತರ ಇಲಾಖೆ ಪರೀಕ್ಷೆಗಳಲ್ಲಿ ಉತ್ತೀರ್ಣರಾಗತಕ್ಕದ್ದು:

1. ಅಕೌಂಟ್ಸ್ ಹೈಯರ್
2. ಜನರಲ್ ಲಾ (ಭಾಗ-1 ಮತ್ತು 2)

ಈ ನೇಮಕಾತಿಗಳ ಜ್ಯೇಷ್ಠತೆ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿನ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232/99 ಹಾಗೂ ಮಾನ್ಯ ಉಚ್ಚ ನ್ಯಾಯಾಲಯದ ರಿಟ್ ಪಿಟಿಷನ್ ಸಂಖ್ಯೆ: 32-35/ 2004 ಮತ್ತು ಕೆ.ಎ.ಟಿ. ಅರ್ಜಿ ಸಂಖ್ಯೆಗಳು 29-30/04; 10/2004; 9334/2003; ಹಾಗೂ 9392-93/03 ರಲ್ಲಿ ನೀಡಿದ ಆದೇಶದ ಮೇಲೆ ಸಲ್ಲಿಸಿರುವ ಪುನರ್ ಮಿಮರ್ಶಿತ ಅರ್ಜಿಯ ಬಗ್ಗೆ ಭಾರತದ ಸರ್ವೋಚ್ಚ ನ್ಯಾಯಾಲಯದ, ಮಾನ್ಯ ಉಚ್ಚ ನ್ಯಾಯಾಲಯದ ಹಾಗೂ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ನೀಡುವ ತೀರ್ಪಿಗೆ ಒಳಪಟ್ಟು ಇರುತ್ತದೆ.

ಇವರು ಆಯುಕ್ತರು, ವಾರ್ತಾ ಇಲಾಖೆ, 2ನೇ ಮಹಡಿ ಬಿ.ಎಂ.ಟಿ.ಸಿ. ಕಟ್ಟಡ, ಶಿವಾಜಿನಗರ ಬಸ್ ನಿಲ್ದಾಣ, ಬೆಂಗಳೂರು-560 051, ಇಲ್ಲಿ ಈ ಅಧಿಸೂಚನೆ ಹೊರಡಿಸಿದ 15 ದಿವಸಗಳ ಒಳಗೆ ಕೆಲಸಕ್ಕೆ ಹಾಜರಾಗತಕ್ಕದ್ದು.

ಇವರಿಗೆ ತರಬೇತಿ ನೀಡುವ ಬಗ್ಗೆ ಕಾರ್ಯಕ್ರಮವನ್ನು ಲಗತ್ತಿಸಿರುವ ಅನುಬಂಧ-2ರಲ್ಲಿ ಸೂಚಿಸಿದಂತೆ ಆಯುಕ್ತರು, ವಾರ್ತಾ ಇಲಾಖೆ, ಇವರು ವ್ಯವಸ್ಥೆ ಮಾಡುವರು.

**ಎಸ್. ಸೀತಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,
ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ.

### ಅನುಬಂಧ-1

**(ಅಧಿಸೂಚನೆ ಸಂಖ್ಯೆ: ವಾಪ್ರಯು 78 ವಾಪ್ರಸಿ 99, ದಿನಾಂಕ: 06.12.2004)**

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ನೋಂದಣಿ ಸಂಖ್ಯೆ | ಮೀಸಲಾತಿ |
|---|---|---|---|
| 1. | ಅರವಿಂದ ಗೌಡ<br>ನಂ.119/5-2, 2ನೇ ಅಡ್ಡರಸ್ತೆ, ಸ್ಕೈಲೈನ್ ಅಪಾರ್ಟ್‌ಮೆಂಟ್ಸ್,<br>ಮಾರುತಿನಗರ, ನಾಗರಬಾವಿ 2ನೇ ಹಂತ,<br>ಬೆಂಗಳೂರು-560 074. | 1050 | ಸಾಮಾನ್ಯ |
| 2. | ವೀರಣ್ಣ ಕಮ್ಮಾರ್<br>ಶ್ರೀಮಾತಾ ನಂ.ಎಸ್‌ಎಸಿ 944 1-ಫೇಸ್, ಹೆಚ್.ಆರ್.<br>ಬಿ.ಆರ್. ಬಡಾವಣೆ, ನೀರಿನ ಟ್ಯಾಂಕ್ ಹತ್ತಿರ, ಕಲ್ಯಾಣನಗರ,<br>ಬೆಂಗಳೂರು-560 043. | 1032 | ಸಾಮಾನ್ಯ |
| 3. | ಅನುಪಮ ಜಿ.ಎಸ್.<br>ನಂ.619, ಶ್ರೀಲಕ್ಷ್ಮೀನಾಗೇಶ್ ನಿಲಯ, 2ನೇ ಅಡ್ಡರಸ್ತೆ, 7ನೇ<br>ಬ್ಲಾಕ್, 2ನೇ ಫೇಸ್, ಬಿಎಸ್‌ಕೆ 3ನೇ ಹಂತ,<br>ಬೆಂಗಳೂರು-560 085. | 1023 | ಸಾಮಾನ್ಯ:ಮ |

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ನೋಂದಣಿ ಸಂಖ್ಯೆ | ಮೀಸಲಾತಿ |
|---|---|---|---|
| 4. | ಸಹನಾ ಎಂ.<br>C/o ಪಿ.ಪಿ. ಕಾವಲೂರ್ ಕೃಪಾಕುಂಜ, ಪ್ರಶಾಂತ್ ಕಾಲೋನಿ, ವಿದ್ಯಾನಗರ, ಹುಬ್ಬಳ್ಳಿ-580 021. | 1002 | ಸಾಮಾನ್ಯ: ಮ |
| 5. | ಪಲ್ಲವಿ ಹೊನ್ನಪುರ<br>ನಂ.402, 1ನೇ ಮೈನ್, 2ನೇ ಬ್ಲಾಕ್, ಹೆಚ್.ಬಿ.ಆರ್. ಬಡಾವಣೆ, ಬೃಂದಾವನಗರ, ಬೆಂಗಳೂರು-560 043. | 1031 | ಪರಿಶಿಷ್ಟ ಜಾತಿ |
| 6. | ಶಂಕರಪ್ಪ ಎಸ್.<br>ಮಾದಪುರ, ಮಾಯಗನಹಳ್ಳಿ ಪೋಸ್ಟ್, ರಾಮನಗರಮ್ ತಾಲ್ಲೂಕು, ಬೆಂಗಳೂರು-562 128. | 1052 | 2ಎ |
| 7. | ಶಫೀಸಾದುದ್ದೀನ್<br>ಶಫೀಸಾಸದನ ನೆಕ್ಕಿಲಾಡಿ, ಉಪ್ಪಿನಂಗಡಿ, ಪುತ್ತೂರು-574 225. | 1019 | 2ಬಿ |
| 8. | ವಿನೋದ್ ಚಂದ್ರ<br>ಶೆಟ್ಟಿಗನಹಳ್ಳಿ, ಶನಿವಾರಸಂತೆ ಪೋಸ್ಟ್, ಸೋಮವಾರಪೇಟೆ ತಾಲ್ಲೂಕು, ಕೊಡಗು ಜಿಲ್ಲೆ. | 1010 | ಸಾಮಾನ್ಯ/ ಗ್ರಾ |
| 9. | ನವೀನ ಸಿ.ಆರ್<br>S/o ಎಲ್. ರಾಜ್ಮಯ್ಯ ನವೀನ ನಿಲಯ, ಜನತಾ ಕ್ವಾಟರ್ಸ್ ಫೋರ್ಟ್, ಅರಕಲಗೂಡು, ಹಾಸನ ಜಿಲ್ಲೆ. | 1018 | ಪರಿಶಿಷ್ಟ ಜಾತಿ |
| 10. | ರೂಪ ಸಿ.<br>C/o ಆನಂದ ಕುಮಾರ್, ನಂ.20, ರಕ್ಷಣಾ ವಿಜ್ಞಾನಿಗಳ ಕಾಲೋನಿ, ಕಗ್ಗದಾಸಪುರ, ಎಕ್ಸ್‌ಟೆನ್ಷನ್, ಸಿ.ವಿ. ರಾಮನ್‌ನಗರ, ಬೆಂಗಳೂರು-560 093. | 1037 | 2ಎ/ ಮ |
| 11. | ರೋಹಿಣಿ ಕೆ.<br>ಮಾನಸ, 179, 2ನೇ ಅಡ್ಡರಸ್ತೆ, 1ನೇ ಫೇಸ್, ಬಾಲಾಜಿ ಕೃಪಾ ಬಡಾವಣೆ, ಅರೇಬಿಕ್ ಕಾಲೇಜ್ ಪೋಸ್ಟ್ ಆರ್.ಕೆ. ಹೆಗ್ಡೆನಗರ, ಬೆಂಗಳೂರು-560 045. | 1026 | ಸಾಮಾನ್ಯ/ ಗ್ರಾ |
| 12. | ಶ್ರೀನಿವಾಸ ಹೆಚ್.<br>ಕನಜನಹಳ್ಳಿ ಪೋಸ್ಟ್, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ-577 546. | 1009 | ಪರಿಶಿಷ್ಟ ಪಂಗಡ |
| 13. | ಮಮತ ಎಂ.ಆರ್.<br>ಮುಗುಳವಳ್ಳಿ, ಮುಗುಳವಳ್ಳಿ ಪೋಸ್ಟ್, ಚಿಕ್ಕಮಗಳೂರು ತಾಲ್ಲೂಕು ಮತ್ತು ಜಿಲ್ಲೆ. | 1007 | 1 |

**ಎಸ್. ಸೀತಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾರ್ತಾ, ಪ್ರವಾಸೋದ್ಯಮ ಹಾಗೂ
ಯುವಜನ ಸೇವಾ ಇಲಾಖೆ.

**ಅನುಬಂಧ-2**
**(ಅಧಿಸೂಚನೆ ಸಂಖ್ಯೆ: ವಾಪ್ರಯು 78 ವಾಪ್ರಸಿ 99, ದಿನಾಂಕ: 06.12.2004)**
**ತರಬೇತಿ ಕಾರ್ಯಕ್ರಮ ಪಟ್ಟಿ**

| ಕ್ರಮ ಸಂಖ್ಯೆ | ತರಬೇತಿಯ ಸ್ಥಳ | | ತರಬೇತಿ ಅವಧಿ |
|---|---|---|---|
| 1. | **ವಾರ್ತಾ ಇಲಾಖೆ ಆಯುಕ್ತರ ಕಛೇರಿ** | | |
| | ಎ) | ಆಡಳಿತ ವಿಭಾಗ | 2 ವಾರ |
| | ಬಿ) | ಲೆಕ್ಕಪತ್ರ ವಿಭಾಗ | 1 ವಾರ |
| | ಸಿ) | ಕ್ಷೇತ್ರ ಪ್ರಚಾರ ವಿಭಾಗ | 1 ವಾರ |
| | ಡಿ) | ಸುದ್ದಿ ಮತ್ತು ಪತ್ರಿಕಾ ವಿಭಾಗ | 1 ವಾರ |
| | ಇ) | ಪ್ರಕಟಣಾ ಶಾಖೆ | 1 ವಾರ |

| | | | |
|---|---|---|---|
| | ಎಫ್) | ಛಾಯಾಚಿತ್ರ ಶಾಖೆ ಮತ್ತು ಚಲನಚಿತ್ರ ಘಟಕ | 1 ವಾರ |
| | ಜಿ) | ವಾಣಿಜ್ಯ ಪ್ರಚಾರ ಶಾಖೆ | 1 ವಾರ |
| 2. | ಸಹಾಯಕ ನಿರ್ದೇಶಕರು/ ಹಿರಿಯ ಸಹಾಯಕ ನಿರ್ದೇಶಕರ ಕಛೇರಿಗಳು | | 6 ವಾರ |
| 3. | ದೂರದರ್ಶನ ಕೇಂದ್ರ | | 1 ವಾರ |
| 4. | ಡಾ: ದ.ರಾ. ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ. | | 4 ವಾರ |
| 5. | ಆಡಳಿತ ತರಬೇತಿ ಸಂಸ್ಥೆ, ಮೈಸೂರು ಇಲ್ಲಿ ಗೆಜೆಟೆಡ್ ಪ್ರೊಬೆಷನರ್ಸ್ ಗಳಿಗೆ ನೀಡುವ ತರಬೇತಿ | | 8 ವಾರ |
| 6. | ಆಕಾಶವಾಣಿ | | 1 ವಾರ |
| 7. | ಕೇಂದ್ರ ಕಛೇರಿಯಲ್ಲಿ ಯೋಜನಾ ವರದಿ ತಯಾರಿಸುವುದು | | 1 ವಾರ |
| 8. | ಟ್ರಾನ್ಸಿಟ್ ವೇಳೆ | | 1 ವಾರ |
| | | | **30 ವಾರ** |

ತರಬೇತಿ ಅವಧಿಯಲ್ಲಿ ಜಿಲ್ಲಾ ವಾರ್ತಾ ಕಛೇರಿಯಲ್ಲಿ ಪ್ರೊಬೇಷನರರಿಗೆ ಒಂದು ವರದಿಯನ್ನು ವಿವರವಾಗಿ ತಯಾರಿಸಲು ಆಯುಕ್ತರು, ವಾರ್ತಾ ಇಲಾಖೆ, ಇವರು ವಹಿಸಿಕೊಡುತ್ತಾರೆ. ಯೋಜನಾ ವರದಿಯನ್ನು ಪ್ರೊಬೆಷನರರು ಇಲಾಖೆಯ ಕೇಂದ್ರ ಕಛೇರಿಯಲ್ಲಿ ತರಬೇತಿ ಹೊಂದುವಾಗ ತಯಾರಿಸುವುದು.

**ಎಸ್. ಸೀತಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾರ್ತಾ, ಪ್ರವಾಸೋದ್ಯಮ ಹಾಗೂ
ಯುವಜನ ಸೇವಾ ಇಲಾಖೆ.

ಪಿ.ಆರ್. 1744

## ಮೀನುಗಾರಿಕೆ ಇಲಾಖೆ
## ಮೀನುಗಾರಿಕೆ ಉಪನಿರ್ದೇಶಕರ ಕಛೇರಿ
## ದಕ್ಷಿಣ ಕನ್ನಡ ಜಿಲ್ಲಾಧಿಕಾರಿಯವರ ಕಛೇರಿ ಆವರಣ (ಹಳೆ ಕಟ್ಟಡ), ಒಂದನೇ ಮಹಡಿ, ಮಂಗಳೂರು-575001
### ಸಾರ್ವಜನಿಕ ಪ್ರಕಟಣೆ
**ಕ್ರಮಾಂಕ: ಇಎಸ್‌ಟಿ/ 40/ 2002-03, ದಿನಾಂಕ: 3ನೇ ಡಿಸೆಂಬರ್, 2004**

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಿಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ಮತ್ತು ಸೆಕ್ಷನ್ 7(1)ರಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಮತ್ತು ಮೇಲ್ಮನವಿ ಪ್ರಾಧಿಕಾರಿಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ಮೀನುಗಾರಿಕೆ ಉಪನಿರ್ದೇಶಕರು, ಮಂಗಳೂರು ಕಛೇರಿಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗೆ ನಮೂದಿಸಿದಂತೆ ಗುರುತಿಸಲಾಗಿದೆ.

| ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|
| ಮೀನುಗಾರಿಕೆ ಉಪನಿರ್ದೇಶಕರು, ಮಂಗಳೂರು. | ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು. |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ ಈ ಕೆಳಗೆ ತಿಳಿಸಿರುವ ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕರ ಪ್ರಕಟನೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

1) **ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯದ ವಿವರಗಳು:**

ಮೀನುಗಾರಿಕೆ ಉಪನಿರ್ದೇಶಕರು, ಮಂಗಳೂರು ಇವರು ವಿಭಾಗ ಮಟ್ಟದ ಅಧಿಕಾರಿಯಾಗಿದ್ದು, ಇವರ ಆಡಳಿತ ವ್ಯಾಪ್ತಿಗೆ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆ ಒಳಪಟ್ಟಿರುತ್ತದೆ. ಈ ಎರಡೂ ಜಿಲ್ಲೆಗಳ ವಿವಿಧ ಘಟಕಗಳ ಮೀನುಗಾರಿಕೆ ಸಹಾಯಕ ನಿರ್ದೇಶಕರು (ದರ್ಜೆ-1) ಮತ್ತು (ದರ್ಜೆ-2) ಅಧಿಕಾರಿಗಳು ಜಿಲ್ಲೆಯಲ್ಲಿ ಮೀನುಗಾರಿಕೆ ಅಭಿವೃದ್ಧಿ ಮತ್ತು ಆಡಳಿತ ವಿಷಯಕ್ಕೆ ಸಂಬಂಧಿಸಿದ ಕೆಲಸ ಕಾರ್ಯಗಳಲ್ಲಿ ಸಹಕಾರ ನೀಡುತ್ತಿರುವರು. ಈ ಕಛೇರಿಯಲ್ಲಿ ಇವರ ಕೆಲಸ ಕಾರ್ಯಗಳ ಬಗ್ಗೆ ಸಹಕರಿಸಲು ಆಡಳಿತ ವಿಷಯಕ್ಕೆ ಸಂಬಂಧಿಸಿದಂತೆ ಒಬ್ಬರು (ಮೀನುಗಾರಿಕೆ ಸಹಾಯಕ ನಿರ್ದೇಶಕರು (ಆಡಳಿತ) ಮತ್ತು ತಾಂತ್ರಿಕ ವಿಷಯಗಳಿಗೆ ಸಂಬಂಧಿಸಿ ಒಬ್ಬರು ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ಇವರು ಕಛೇರಿಯಲ್ಲಿ ಇರುತ್ತಾರೆ. ಮೀನುಗಾರಿಕೆ ಉಪ ನಿರ್ದೇಶಕರು, ಮಂಗಳೂರು ಕಛೇರಿಯಲ್ಲಿ ಮೇಲೆ ತಿಳಿಸಿದ ಇಬ್ಬರು ಅಧಿಕಾರಿಗಳಲ್ಲದೆ ಈ ಕೆಳಕಂಡಂತೆ ಸಿಬ್ಬಂದಿ ವ್ಯವಸ್ಥೆ ಇದೆ.

| | | |
|---|---|---|
| 1) | ಕಛೇರಿ ಅಧೀಕ್ಷಕರು | 1 ಹುದ್ದೆ |
| 2) | ಸಹಾಯಕ ಸಾಂಖ್ಯಿಕ ಅಧಿಕಾರಿ | 1 ಹುದ್ದೆ |
| 3) | ಪ್ರಥಮ ದರ್ಜೆ ಸಹಾಯಕರು (ಅಕೌಂಟೆಂಟ್) | 1 ಹುದ್ದೆ |
| 4) | ಪ್ರಥಮ ದರ್ಜೆ ಸಹಾಯಕರು | 2 ಹುದ್ದೆಗಳು |
| 5) | ದ್ವಿತೀಯ ದರ್ಜೆ ಸಹಾಯಕರು | 4 ಹುದ್ದೆಗಳು |
| 6) | ಶೀಘ್ರಲಿಪಿಗಾರರು | 1 ಹುದ್ದೆ |
| 7) | ಬೆರಳಚ್ಚುಗಾರರು | 1 ಹುದ್ದೆ |
| 8) | ವಾಹನ ಚಾಲಕ | 1 ಹುದ್ದೆ |
| 9) | ಗ್ರೂಪ್ ಡಿ ನೌಕರರು | 3 ಹುದ್ದೆಗಳು |
| | **ಒಟ್ಟು** | **15 ಹುದ್ದೆಗಳು** |

ಈ ಕಛೇರಿಯು ವಲಯ ಮಟ್ಟದ ಕಛೇರಿ ಆಗಿದ್ದು, ಜಿಲ್ಲೆಗಳಲ್ಲಿ ಇರುವ ಇಲಾಖಾ ಕಛೇರಿಗಳ ವಿವರ ಈ ರೀತಿಯಲ್ಲಿ ಇರುತ್ತದೆ.

1) **ದಕ್ಷಿಣ ಕನ್ನಡ ಜಿಲ್ಲೆ:**
   1. ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ದ.ಕ.ಮಂಗಳೂರು.
   2. ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) (ದೋಣಿ ಮತ್ತು ಸಲಕರಣೆ) ಮಂಗಳೂರು.
   3. ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ಮಂಗಳೂರು.
2) **ಉಡುಪಿ ಜಿಲ್ಲೆ:**
   1. ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) (ತಾಂತ್ರಿಕ) ಉಡುಪಿ.
   2. ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ಉಡುಪಿ.
   3. ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ಕುಂದಾಪುರ.
   4. ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ಕಾರ್ಕಳ.

ಮೀನುಗಾರಿಕೆ ಇಲಾಖೆಗೆ ಸಂಬಂಧಿಸಿದಂತೆ ಜಿಲ್ಲಾ ಹಾಗೂ ವಲಯ ಮಟ್ಟದಲ್ಲಿ ರಾಜ್ಯದ ಮೀನುಗಾರರ ಸಮುದಾಯದ ಅಭಿವೃದ್ಧಿಗಾಗಿ ಮೀನುಗಾರಿಕೆ ಇಲಾಖೆಯಿಂದ ಈ ಕೆಳಗೆ ನಮೂದಿಸಲಾದ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

**ಜಿಲ್ಲಾ ವಲಯ ಯೋಜನೆಗಳು:**

1. ಮೀನುಮರಿ ಪಾಲನೆ ಮತ್ತು ಹಂಚಿಕೆ
2. ಮೀನುಮರಿ ಕೊಳ ನಿರ್ಮಾಣಕ್ಕೆ ಸಹಾಯಧನ
3. ಮೀನುಗಾರಿಕೆ ಸಲಕರಣೆಗೆ ಸಹಾಯಧನ
4. ಮೀನು ಮಾರುಕಟ್ಟೆ ಪುನರ್ ನಿರ್ಮಾಣ/ ನವೀಕರಣಕ್ಕೆ ಸಹಾಯಧನ
5. ಮೀನುಗಾರರ ಸಹಕಾರಿ ಸಂಘಗಳಿಗೆ ವ್ಯವಸ್ಥಾಪಕ ಸಹಾಯಧನ
6. ವಸ್ತುಪ್ರದರ್ಶನ ಮತ್ತು ತರಬೇತಿ
7. ಮೀನುಗಾರರ ಸಹಕಾರಿ ಸಂಘಗಳಲ್ಲಿ ಹೂಡಿಕೆ
8. ಕಟ್ಟಡಗಳ ನಿರ್ಮಾಣ ಹಾಗೂ ದುರಸ್ತಿ
9. ಸೀಗಡಿ ಕೃಷಿ ಅಭಿವೃದ್ಧಿಗೆ ನೆರವು.

**ರಾಜ್ಯ ವಲಯ ಯೋಜನೆಗಳು:**

1) ಮೀನುಗಾರರಿಗೆ ಮನೆಗಳನ್ನು ನಿರ್ಮಿಸಲು "ಮತ್ಸ್ಯಾಶ್ರಯ" ಯೋಜನೆಯಡಿ ಸಹಾಯಧನ.
2) ಮೀನು ಮಾರಾಟಕ್ಕೆ ಶಾಖ ನಿರೋಧಕ ಪೆಟ್ಟಿಗೆ/ ಸೈಕಲ್‌ಗಳನ್ನು/ ಮೊಪೆಡ್/ ತ್ರಿಚಕ್ರ ವಾಹನಗಳನ್ನು ಖರೀದಿಸಲು ಸಹಾಯಧನ.
3) ಆಳ ಸಮುದ್ರ ಮೀನುಗಾರಿಕೆಗೆ ಉಪಯೋಗಿಸುವ ಎಲೆಕ್ಟ್ರಾನಿಕ್ ಉಪಕರಣಗಳ ಖರೀದಿ ಮೇಲೆ ಸಹಾಯಧನ.
4) ಯಾಂತ್ರೀಕೃತ ಮೀನುಗಾರಿಕೆ ದೋಣಿಗಳು ಬಳಸುವ ಡೀಸೆಲ್ ಮೇಲಿನ ರಾಜ್ಯ ಮಾರಾಟ ಕರವನ್ನು ಮಾಫಿ ಮಾಡುವ ಯೋಜನೆ.
5) ಮೀನುಗಾರಿಕೆ ಕೊಂಡಿರಸ್ತೆಗಳು ಮತ್ತು ಸೇತುವೆಗಳ ನಿರ್ಮಾಣ.
6) ಮೀನುಗಾರರ ಸಂಕಷ್ಟ ಪರಿಹಾರ ನಿಧಿ ಯೋಜನೆ.
7) ಸಮುದ್ರ ರ್‍ಯಾಂಚಿಂಗ್ ಕಾರ್ಯಕ್ರಮ.

**ಕೇಂದ್ರ ಪುರಸ್ಕೃತ ಯೋಜನೆಗಳು:**

1) ಸಾಂಪ್ರದಾಯಿಕ ನಾಡ ದೋಣಿಗಳನ್ನು ಯಾಂತ್ರೀಕರಿಸಲು ಸಹಾಯಧನ.
2) ಉಳಿತಾಯ ಮತ್ತು ಪರಿಹಾರ ಯೋಜನೆ.
3) ಮೀನುಗಾರರ ಸಾಮೂಹಿಕ ಅಪಘಾತ ವಿಮಾ ಯೋಜನೆ.
4) ಯಾಂತ್ರೀಕೃತ ಮೀನುಗಾರಿಕೆ ಬೋಟುಗಳು ಉಪಯೋಗಿಸುವ ಡೀಸೆಲ್ ಎಣ್ಣೆಯ ಮೇಲಿನ ಕೇಂದ್ರ ಅಬಕಾರಿ ಸುಂಕದ ಮೇಲೆ ಸಹಾಯಧನ ಯೋಜನೆ.
5) ಮೀನುಗಾರಿಕೆ ಬಂದರುಗಳು ಮತ್ತು ಇಳಿದಾಣಗಳ ನಿರ್ಮಾಣ ಮತ್ತು ದುರಸ್ತಿ.
6) ರಾಷ್ಟ್ರೀಯ ಸಹಕಾರ ಅಭಿವೃದ್ಧಿ ನಿಗಮ (ಎನ್.ಸಿ.ಡಿ.ಸಿ.)ಯ ಸಮಗ್ರ ಕರಾವಳಿ ಮೀನುಗಾರಿಕೆ ಅಭಿವೃದ್ಧಿ ಯೋಜನೆ.

ಮೇಲೆ ತಿಳಿಸಿದ ಯೋಜನೆಗಳಲ್ಲದೆ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಿಗೆ ಸಂಬಂಧಿಸಿದ ಮೀನುಗಾರಿಕೆ ಅಂಕಿಅಂಶಗಳ ಮಾಹಿತಿಯನ್ನು ತಾಲ್ಲೂಕು ಮಟ್ಟದ ಅಧಿಕಾರಿಗಳಿಂದ ಪಡೆದು ಅದನ್ನು ಕ್ರೋಢೀಕರಿಸಿ ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು ರವರಿಗೆ ಒಪ್ಪಿಸಲಾಗುತ್ತಿದೆ. ಅಲ್ಲದೆ, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಹೊಸ ಯಾಂತ್ರೀಕೃತ ಮೀನುಗಾರಿಕಾ ದೋಣಿಗಳ ನಿರ್ಮಾಣಕ್ಕಾಗಿ ಸಾಧ್ಯತಾ ಪತ್ರವನ್ನು ಕೋರಿ ಬಂದ ಅರ್ಜಿಗಳನ್ನು ಪರಿಶೀಲಿಸಿ, ಈ ಬಗ್ಗೆ ಸಮಿತಿ ಸಭೆಯನ್ನು ಜರುಗಿಸಿ, ಸಭೆಯ ನಿರ್ಣಯದಂತೆ ಸಾಧ್ಯತಾ ಪತ್ರಗಳನ್ನು ನೀಡಲಾಗುತ್ತಿದೆ.

2. **ಅಧಿಕಾರಿಗಳು ಮತ್ತು ನೌಕರರ ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:**

ಮೇಲೆ ವಿವರಿಸಿದಂತೆ ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ವಲಯ ಮಟ್ಟದಲ್ಲಿ ಮೀನುಗಾರಿಕೆ ಉಪನಿರ್ದೇಶಕರು, ಮಂಗಳೂರು ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ಮೀನುಗಾರಿಕೆ ಉಪನಿರ್ದೇಶಕರದ್ದಾಗಿರುತ್ತದೆ.

ತ್ವರಿತ ಗತಿಯಲ್ಲಿ ಇಲಾಖೆಯಲ್ಲಿನ ಕಾರ್ಯನಿರ್ವಹಣೆಗಾಗಿ ಮೀನುಗಾರಿಕೆ ಉಪನಿರ್ದೇಶಕರು ಮಂಗಳೂರು ಕಛೇರಿಯ ಆದೇಶ ಸಂಖ್ಯೆ: ಎಡಿಎಂ/4/2004/05 ದಿನಾಂಕ: 27.04.2004ರಲ್ಲಿ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಿಷಯ ನಿರ್ವಾಹಕರು ನಿರ್ವಹಿಸಬೇಕಾದ ಸಂಕಲನಗಳ ವಿವರ ಹಾಗೂ ಇವುಗಳ ಮೇಲ್ವಿಚಾರಣೆ ಮಾಡುವ ಅಧಿಕಾರಿಗಳ ಮಾಹಿತಿಯನ್ನು ಹೊರಡಿಸಲಾಗಿದೆ. ಈ ಕಛೇರಿಯಲ್ಲಿ ಒಬ್ಬರು ಕಛೇರಿ ಅಧೀಕ್ಷಕರು, ಒರ್ವ ಸಹಾಯಕ ಸಾಂಖ್ಯಿಕ ಅಧಿಕಾರಿ, 3 ಪ್ರಥಮ ದರ್ಜೆ ಸಹಾಯಕರು, 4 ದ್ವಿತೀಯ ದರ್ಜೆ ಸಹಾಯಕರು ಕಾರ್ಯ ನಿರ್ವಹಿಸುತ್ತಿದ್ದು, ಇವರು ಸರ್ಕಾರಿ ಆಡಳಿತ ನಿಯಮಾವಳಿಯಂತೆ ಕಛೇರಿಯ ದೈನಂದಿನ ಪತ್ರ ವ್ಯವಹಾರ ಹಾಗೂ ಆಡಳಿತ ನಿರ್ವಹಣೆಯ ಜವಾಬ್ದಾರಿ ಹೊಂದಿರುತ್ತಾರೆ.

3. **ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಆಯಾ ಅಧಿಕಾರಿಗಳಿಗೆ ಪೂರಕವಾಗಿ ಸಹಾಯಕವಾಗುವಂತೆ ಕಾರ್ಯನಿರ್ವಹಿಸುವರು. ಸಾರ್ವಜನಿಕರಿಂದ ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಪತ್ರಗಳನ್ನು ಕಛೇರಿ ಮುಖ್ಯಸ್ಥರ ಕಿರುಸಹಿ ಪಡೆದು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ನೀಡಲಾಗುವುದು. ತುರ್ತು ಟಪ್ಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ಕಛೇರಿ ಮುಖ್ಯಸ್ಥರ ಆದೇಶದನ್ವಯ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ, ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮಕೈಗೊಳ್ಳುವರು.

4. **ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**

1) ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ವಿಭಾಗದಲ್ಲಿ ನೋಂದಾಯಿಸಿ ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2) ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.
3) ಆಗಿಂದಾಗ್ಗೆ ಅಧಿಕಾರಿಗಳಿಂದ ವಿಷಯ ನಿರ್ವಾಹಕರ ಮೇಲು ತಪಾಸಣೆ ಕಾರ್ಯ.
4) ಸರ್ಕಾರವು: ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು.
5) ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

5. **ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು**

ಇಲಾಖೆಯಿಂದ ಹೊರಡಿಸಲಾಗುವ ಪ್ರಮುಖ ಪ್ರಕಟಣೆ ಹಾಗೂ ಆದೇಶದ ಪ್ರತಿಗಳನ್ನು ಕಛೇರಿಯ ಪ್ರಕಟಣಾ ಫಲಕದಲ್ಲಿ ಸಾರ್ವಜನಿಕ ಮಾಹಿತಿಗಾಗಿ ಪ್ರಕಟಿಸಲಾಗುತ್ತದೆ. ಅವುಗಳ ಪ್ರತಿಗಳನ್ನು ಸಂಬಂಧಪಟ್ಟ ಅಧೀನಾಧಿಕಾರಿಗಳಿಗೆ ಕಳುಹಿಸಿ ಅವರ ಕಛೇರಿಯ ಪ್ರಕಟಣಾ ಫಲಕದಲ್ಲಿ ಪ್ರಕಟಿಸಲು ಎಲ್ಲಾ ಅಧೀನಾಧಿಕಾರಿಗಳಿಗೆ ಸೂಚನೆಗಳನ್ನು ನೀಡಲಾಗಿದೆ. ಮೀನುಗಾರಿಕೆಗೆ ಸಂಬಂಧಪಟ್ಟ ವಿಷಯಗಳ ಬಗ್ಗೆ ಮಾಹಿತಿಯನ್ನು ಮೀನುಗಾರಿಕೆ ಉಪನಿರ್ದೇಶಕರು, ಮಂಗಳೂರುರವರಿಂದ ಮತ್ತು ಜಿಲ್ಲಾ ಮಟ್ಟದ ಅಧಿಕಾರಿಗಳಾದ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ಹಾಗೂ ತಾಲ್ಲೂಕು ಮಟ್ಟದ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ರವರಿಂದ ಸಾರ್ವಜನಿಕರು ಪಡೆಯಬಹುದಾಗಿದೆ. ಈ ಕಛೇರಿಯಲ್ಲಿ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಆಡಳಿತ) ರವರು ಸಾರ್ವಜನಿಕ ಕುಂದುಕೊರತೆ ಸಂಪರ್ಕಾಧಿಕಾರಿಯಾಗಿದ್ದು, ಹೆಚ್ಚಿನ ವಿವರಗಳಿಗೆ ಅವರನ್ನು ಸಂಪರ್ಕಿಸಬಹುದಾಗಿದೆ. ದೂರವಾಣಿ ಸಂಖ್ಯೆ ಹಾಗೂ ವಿಳಾಸ ಈ ಕೆಳಕಂಡಂತಿದೆ.

ಮೀನುಗಾರಿಕೆ ಸಹಾಯಕ ನಿರ್ದೇಶಕರು (ಆಡಳಿತ) ದೂರವಾಣಿ: 2425680
ಮೀನುಗಾರಿಕೆ ಉಪನಿರ್ದೇಶಕರ ಕಛೇರಿ,
ದಕ್ಷಿಣ ಕನ್ನಡ ಜಿಲ್ಲಾಧಿಕಾರಿಗಳ ಕಛೇರಿ, ಹಳೆ ಕಟ್ಟಡ, ಮಂಗಳೂರು.

ಪ್ರತೀ ತಿಂಗಳ ಪ್ರಥಮ ಶನಿವಾರವು **"ಸಾರ್ವಜನಿಕ ಕುಂದುಕೊರತೆಗಳನ್ನು ಆಲಿಸುವ ದಿನ"** ವಾಗಿದ್ದು, ಸದ್ರಿ ದಿನ ಸಾರ್ವಜನಿಕರು ಖುದ್ದಾಗಿ ಮೀನುಗಾರಿಕೆ ಉಪನಿರ್ದೇಶಕರು ಇವರನ್ನು ಭೇಟಿಯಾಗಿ ತಮ್ಮ ಕುಂದು ಕೊರತೆಗಳನ್ನು ತಿಳಿಸಿ ಅದಕ್ಕೆ ಪರಿಹಾರವನ್ನು ಪಡೆಯಬಹುದಾಗಿದೆ.

ಮೀನುಗಾರಿಕೆ ಉಪನಿರ್ದೇಶಕರು,
ಮಂಗಳೂರು.

ಪಿ.ಆರ್. 1745

## OFFICE OF THE COMMISSIONER OF COMMERCIAL TAXES, GANDHINAGAR, BANGALORE

## NOTIFICATION

### No. KSA.CR.186/04-05, Bangalore, Dated: 10th December, 2004

In exercise of the powers conferred on me by the proviso to sub-section (1) of Section 19-A of the KST Act, 1957 (Karnataka Act 25 of 1957), I Ashok Kumar C. Manoli, Commissioner of Commercial Taxes, Karnataka, do hereby notify that M/s. Bharath Heavy Electriclas Ltd., shall make deduction of tax at source as provided under sub-section (1) of Section 19-A of KST Act, 1957 with immediate effect and upto 31-03-2005 out of amounts payable by it to any dealer executing works contract for it.

**ASHOK KUMAR C. MANOLI**
Commissioner of Commercial Taxes,
Karnataka, Bangalore.

PR-1747

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಅಧಿಸೂಚನೆ

### ಸಂಖ್ಯೆ: ಆಕುಕ 496 ಪಿಟಿಡಿ 2004, ಬೆಂಗಳೂರು, ದಿನಾಂಕ: 29ನೇ ನವೆಂಬರ್, 2004

ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ: ಪಿಎಸ್‌ಸಿ 12 ಆರ್‌ಟಿಬಿ 2003, ದಿನಾಂಕ: 26.06.2004ರನ್ವಯ ಆಯ್ಕೆಗೊಂಡಿರುವ, ಈ ಕೆಳಕಂಡ ಅಭ್ಯರ್ಥಿಯನ್ನು ಭಾರತೀಯ ವೈದ್ಯಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ಉಪನ್ಯಾಸಕರು (ಆಯುರ್ವೇದ) (ಬ್ಯಾಕ್‌ಲಾಗ್) ಹುದ್ದೆಗೆ ರೂ. 8000-275-13500ರ ಎಐಸಿಟಿಇ ವೇತನ ಶ್ರೇಣಿಯಲ್ಲಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರ ಹೆಸರಿನ ಮುಂದೆ ಸೂಚಿಸಿರುವ ಜಾಗಕ್ಕೆ ಸ್ಥಳನಿಯುಕ್ತಿ ಮಾಡಿ ನೇಮಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ಹುಟ್ಟಿದ ದಿನಾಂಕ | ಮೀಸಲಾತಿ | ವಿದ್ಯಾರ್ಹತೆ | ನೇಮಕ ಮಾಡಿದ ಸ್ಥಳ ನಿಯುಕ್ತಿಗೊಳಿಸಿದ ಸ್ಥಳ |
|---|---|---|---|---|---|
| 1 | 2 | 3 | 4 | 5 | 6 |
| 1. | ಡಾ: ಆರ್.ಸಿ. ಮೈತ್ರೇಯಿ ಸಂಖ್ಯೆ: 619, ಮಣಿಕರಣಕ, ನ್ಯೂ ಕಾಂತರಾಜ ಅರಸ್‌ರಸ್ತೆ, ಕುವೆಂಪು ನಗರ, ಮೈಸೂರು-570 023 | 20.04.1974 | ಪರಿಶಿಷ್ಟ ಜಾತಿ | ಬಿಎಎಂಎಸ್ | ಸರ್ಕಾರ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಮೈಸೂರು. |

ಈ ನೇಮಕಾತಿಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

1. ಸದರಿ ನೇಮಕಾತಿಯು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಾವಳಿ 1977ರ ನಿಯಮ 5 ಮತ್ತು 6 ರನ್ವಯ ಎರಡು ವರ್ಷಗಳ ಖಾಯಂ ಪೂರ್ವ ಪರಿವೀಕ್ಷಣಾ ಅವಧಿಗೆ ಒಳಪಟ್ಟಿರುತ್ತದೆ.
2. ಸದರಿ ಅಭ್ಯರ್ಥಿಯ ನೇಮಕಾತಿಯು ಮತ್ತು ಸೇವಾ ಸೌಲಭ್ಯಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮಗಳು ಆದೇಶಗಳ ಅಧೀನಕ್ಕೊಳಪಟ್ಟಿರುತ್ತದೆ.
3. ಸದರಿ ನೇಮಕಾತಿಯು ತಾತ್ಕಾಲಿಕವಾಗಿದ್ದು, ತಕ್ಷಣದಿಂದ ಜಾರಿಗೆ ಬರುತ್ತದೆ.
4. ಈ ನೇಮಕಾತಿಯ ಆದೇಶ ತಲುಪಿದ ದಿನಾಂಕದಿಂದ 15 ದಿನಗಳೊಳಗಾಗಿ ಅಭ್ಯರ್ಥಿಯು ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ನಿರ್ದೇಶಕರಲ್ಲಿ ಹಾಜರಾಗಿ ಅವರಿಂದ ಚಲನಾದೇಶವನ್ನು ಪಡೆದು ನಂತರ ನೇಮಕ ಮಾಡಲಾದ ಹುದ್ದೆ ಮತ್ತು ಸ್ಥಳಕ್ಕೆ ತಪ್ಪದೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು, ನಿಗದಿತ ದಿನಾಂಕದೊಳಗಾಗಿ ಕರ್ತವ್ಯಕ್ಕೆ ಹಾಜರಾಗದಿದ್ದಲ್ಲಿ ನೇಮಕಾತಿಯ ಆದೇಶವನ್ನು ಯಾವುದೇ ಮುನ್ಸೂಚನೆ ಇಲ್ಲದೆ ರದ್ದುಗೊಳಿಸಲಾಗುವುದು.
5. ಸದರಿ ಅಭ್ಯರ್ಥಿಯು ಸರ್ಕಾರವು ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ಖಾಯಂ ಪೂರ್ವ ಅವಧಿಯಾದ 2 ವರ್ಷದೊಳಗಾಗಿ ತೇರ್ಗಡೆ ಹೊಂದತಕ್ಕದ್ದು.
6. ಸದರಿ ಅಭ್ಯರ್ಥಿಯು ನೇಮಕ ಮಾಡಲ್ಪಟ್ಟ ಕೇಂದ್ರ ಸ್ಥಳದಲ್ಲಿಯೇ ವಾಸಿಸತಕ್ಕದ್ದು ಸದರಿ ಅಭ್ಯರ್ಥಿಗೆ ನೇಮಕಾತಿ ಮಾಡಿದ ಸ್ಥಳಕ್ಕೆ ಸೇರಲು ಯಾವುದೇ ಪ್ರಯಾಣ ಭತ್ಯೆ ಮತ್ತು ದಿನಭತ್ಯೆ ನೀಡಲಾಗುವುದಿಲ್ಲ.
7. ಸದರಿ ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವ ಮೊದಲು ಸಂಬಂಧಪಟ್ಟ ಅಧಿಕಾರಿಗಳಿಗೆ ಮೂಲ ದಾಖಲಾತಿಗಳನ್ನು ಅಂದರೆ, ಉಪನ್ಯಾಸಕರು, (ಆಯುರ್ವೇದ) ಹುದ್ದೆಗೆ ಗೊತ್ತುಪಡಿಸಿರುವ ವಿದ್ಯಾರ್ಹತೆ, ಅಂಕಪಟ್ಟಿ, ಜನ್ಮದಿನಾಂಕದ ದಾಖಲೆ, ಜಾತಿ ಪ್ರಮಾಣ ಪತ್ರ ಇತ್ಯಾದಿಗಳನ್ನು ಸಲ್ಲಿಸತಕ್ಕದ್ದು.
8. ಅಭ್ಯರ್ಥಿಯು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡವಳಿಕೆ ಪ್ರಮಾಣ ಪತ್ರವನ್ನು ಪಡೆದು ಕೆಲಸಕ್ಕೆ ಹಾಜರಾಗುವ ಸಮಯದಲ್ಲಿ ಹಾಜರುಪಡಿಸತಕ್ಕದ್ದು.
9. ಸದರಿ ಅಭ್ಯರ್ಥಿಯು ವಿದ್ಯಾರ್ಹತೆ, ಜನ್ಮದಿನಾಂಕ ಇತ್ಯಾದಿ ಪ್ರಮಾಣ ಪತ್ರಗಳಲ್ಲಿ ತಪ್ಪು ಮಾಹಿತಿ ಒದಗಿಸಿರುವುದು ಕಂಡು ಬಂದಲ್ಲಿ ಅವರ ನೇಮಕಾತಿ ಆದೇಶವನ್ನು ಯಾವುದೇ ಮುನ್ಸೂಚನೆ ಇಲ್ಲದೆ ರದ್ದುಗೊಳಿಸಲಾಗುವುದು ಮತ್ತು ಅಭ್ಯರ್ಥಿಯ ವಿರುದ್ಧ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುವುದು.
10. ಸದರಿ ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾದ ಬಗ್ಗೆ ಸರ್ಕಾರವನ್ನೊಳಗೊಂಡಂತೆ ಸಂಬಂಧಪಟ್ಟ ಎಲ್ಲಾ ಅಧಿಕಾರಿಗಳಿಗೆ ಸಿಟಿಸಿಯನ್ನು ಕಳುಹಿಸತಕ್ಕದ್ದು.
11. ಈ ಆದೇಶದನ್ವಯ ಅಭ್ಯರ್ಥಿಯು 15 ದಿನಗಳೊಳಗಾಗಿ ಕರ್ತವ್ಯಕ್ಕೆ ಹಾಜರಾಗದಿದ್ದಲ್ಲಿ ಅಂತಹ ಪ್ರಕರಣವನ್ನು ಕೂಡಲೇ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖಾ ನಿರ್ದೇಶಕರು, ಸರ್ಕಾರದ ಗಮನಕ್ಕೆ ತರತಕ್ಕದ್ದು.

**ಚೋಮಾನಾಯಕ್ ಜಿ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 1748

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ

**ಸಂಖ್ಯೆ: ಕಾಪಕಾ:ಎಫ್:ಎಸ್ಆರ್-57:2004**

**ಅರ್ಜಿದಾರರು:**

1. ಶ್ರೀಮತಿ ಮಂಗಳಗೌರಮ್ಮ ಕೋಂ ದೇವರಾಜ್, 28 ವರ್ಷ,
2. ಕು: ನಿತ್ಯಾ ಬಿನ್ ದೇವರಾಜ್ 8 ವರ್ಷ.
3. ಕು: ನಯನ ಬಿನ್ ದೇವರಾಜ್ 5 ವರ್ಷ.

ವಾಸ: ಮುಳುಕೆರೆ ಗ್ರಾಮ, ಅಗ್ರಹಾರ ಬೆಳಗೂಳಿ ಅಂಚೆ, ಮುಳುಕೆರೆ ಗ್ರಾಮ, ನುಗ್ಗೇನಹಳ್ಳಿ ಹೋಬಳಿ, ಚನ್ನರಾಯಪಟ್ಟಣ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು:**

1. ಉಪ ಕಾರ್ಯಪಾಲಕ ಅಭಿಯಂತರರು, ಮಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂ.ಲಿ., ಚನ್ನರಾಯಪಟ್ಟಣ ಉಪವಿಭಾಗ, ಚನ್ನರಾಯಪಟ್ಟಣ.
2. ಕಾರ್ಯಪಾಲಕ ಅಭಿಯಂತರರು, ಮಂಗಳೂರು ವಿದ್ಯುಚ್ಛಕ್ತಿ ಕಂ.ಲಿ., ಚನ್ನರಾಯಪಟ್ಟಣ ವಿಭಾಗ, ಚನ್ನರಾಯಪಟ್ಟಣ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಎಂ.ಬಿ. ದೇವರಾಜು ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 28.06.2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ಅವಲಂಬಿತರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಎನ್. ರಾಮಕೃಷ್ಣ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

ಪಿ.ಆರ್. 1749

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಪಿ.ಬಿ.ನಂ. 5309, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಕೃಮಾಇ: 30: ನಿಯವಿ: 2004, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್, 2004**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27)ರ ಪ್ರಕರಣ 6ರ ಉಪಪ್ರಕರಣ (2)(ಎ) ಮೇರೆಗೆ ಹೊರಡಿಸಲಾದ ಅಧಿಸೂಚನೆ ಸಂಖ್ಯೆ: ಕೃಮಾಇ:22: ನಿಯವಿ: 94(2), ದಿನಾಂಕ:18.12.1996 (ಇನ್ನು ಮುಂದೆ ಸದರಿ ಅಧಿಸೂಚನೆ ಎಂದು ಉಲ್ಲೇಖಿಸಲಾಗಿದೆ) ರಲ್ಲಿ ಕರ್ನಾಟಕದಲ್ಲಿನ ಕೃಷಿ ಮಾರಾಟ ನಿರ್ದೇಶಕರು, ಬೆಂಗಳೂರು ಇವರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಸಂತೆಸರಗೂರು ಇದರ ನಗರಸಭಾ ಪರಿಮಿತಿಯೊಳಗಿನ ಪ್ರದೇಶವನ್ನು "ಮಾರುಕಟ್ಟೆ" ಎಂದು ಮತ್ತು ಸದರಿ ಅಧಿಸೂಚನೆಯ ಅನುಸೂಚಿ "ಎ" ಯಲ್ಲಿ ನಿರ್ದಿಷ್ಟಪಡಿಸಿರುವ ಸ್ಥಳವನ್ನು "ಮಾರುಕಟ್ಟೆ ಪ್ರಾಂಗಣ" ಎಂದು, ಅನುಸೂಚಿ "ಬಿ"ನಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು "ಉಪ ಮಾರುಕಟ್ಟೆ ಪ್ರಾಂಗಣ" ವೆಂದು ಘೋಷಿಸಿದ್ದರು;

ಮತ್ತು ಆದಕಾರಣ ಸಂತೆಸರಗೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಸರ್ವೆ ನಂ.131ರ 6.00 ಎಕರೆ ಪ್ರದೇಶದ ಈ ಕೆಳಗಿನ ಸೀಮಾಬದ್ಧ ಸ್ಥಳವನ್ನು ಸದರಿ ಅಧಿಸೂಚನೆಯಲ್ಲಿ ಹೊರಡಿಸಲಾದ ಮಾರುಕಟ್ಟೆ ಪ್ರಾಂಗಣದ ಬದಲು "ಮಾರುಕಟ್ಟೆ ಪ್ರಾಂಗಣ" ವೆಂದು ಘೋಷಿಸಲು ಈ ಕಛೇರಿಯ ಸಮ ಸಂಖ್ಯೆಯ ದಿನಾಂಕ: 14.09.2004ರ ಅಧಿಸೂಚನೆಯಲ್ಲಿ ಉದ್ದೇಶಿಸಿ ದಿನಾಂಕ: 02.10.2004ರ ಕನ್ನಡಪ್ರಭ ದಿನಪತ್ರಿಕೆಯಲ್ಲಿ ಹಾಗೂ ದಿನಾಂಕ: 21.10.2004ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದೆ. ಈ ಸಂಬಂಧ ನಿಗದಿತ ಅವಧಿಯೊಳಗೆ ಯಾವುದೇ ಆಕ್ಷೇಪಣೆ ಮತ್ತು ಸಲಹೆಗಳು ಸ್ವೀಕೃತವಾಗಿರುವುದಿಲ್ಲ.

ಆದುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 3ನ್ನು ಓದಿ ಪ್ರಕರಣ 6(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು, ಸದರಿ ಅಧಿಸೂಚನೆಯಲ್ಲಿ ಅನುಸೂಚಿ "ಎ" ನಲ್ಲಿ ನಿರ್ದಿಷ್ಟಪಡಿಸಿರುವ ಸ್ಥಳವನ್ನು ರದ್ದುಪಡಿಸಿ, ಸಂತೆಸರಗೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಮಾರುಕಟ್ಟೆ ಕ್ಷೇತ್ರದಲ್ಲಿ ಸರ್ಕಾರದ ಅಧಿಸೂಚನೆಯ ಮೂಲಕ ಅಧಿಸೂಚಿಸಲ್ಪಟ್ಟಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಸಂತೆಸರಗೂರು ಪಟ್ಟಣ ಪಂಚಾಯಿತಿ ಪರಿಮಿತಿಯಲ್ಲಿರುವ ಸರ್ವೆ ನಂ.131ರ 6.00 ಎಕರೆ ಪ್ರದೇಶವನ್ನು "ಮಾರುಕಟ್ಟೆ" ಎಂದು ಮತ್ತು ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು "ಮಾರುಕಟ್ಟೆ ಪ್ರಾಂಗಣ" ವೆಂದು ಈ ಮೂಲಕ ಘೋಷಿಸಿದ್ದೇನೆ.

**ಅನುಸೂಚಿ-ಎ**

ಸಂತೆಸರಗೂರು ಪಟ್ಟಣ ಪಂಚಾಯಿತಿ ಪರಿಮಿತಿಯಲ್ಲಿರುವ ಸರ್ವೆ ನಂ. 131ರ 6.00 ಎಕರೆ ಪ್ರದೇಶದ ಈ ಕೆಳಗಿನ ಸೀಮಾಬದ್ಧ ಸ್ಥಳ:

ಪೂರ್ವಕ್ಕೆ - ಸರ್ವೆ ನಂ.132ರ ಜಮೀನು.

ಪಶ್ಚಿಮಕ್ಕೆ - ಮಸೀದಿ ಹಾಗೂ ಶ್ರೀ ಯಾರಬ್ ಇವರ ನಿವೇಶನ ಸಂಖ್ಯೆ: 265.

ದಕ್ಷಿಣಕ್ಕೆ - ಸರಗೂರು- ಬಿದರಹಳ್ಳಿ ಸರ್ಕಾರದ ರಸ್ತೆ.

ಉತ್ತರಕ್ಕೆ - ಸ್ಲೀಪರ್ ಕಾಲೋನಿ.

**ಸೈಯದ್ ಜಮೀರ್ ಪಾಷಾ**

ಪಿ.ಆರ್. 1750 ನಿರ್ದೇಶಕರು, ಕೃಷಿ ಮಾರುಕಟ್ಟೆ ಇಲಾಖೆ, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಂತಿಮ ಅಧಿಸೂಚನೆ**

**ನಂ. ಕೆ.ಎಸ್.ಎ. ಸಿ.ಆರ್ 4/ 2004-05, ದಿನಾಂಕ: 10ನೇ ಡಿಸೆಂಬರ್, 2004**

ನಂ. ಕೆ.ಎಸ್.ಎ. ಸಿ.ಆರ್. 4/2004-05 ದಿನಾಂಕ: 02.08.2004ರ ಪ್ರಿಲಿಮಿನರಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ ಅದರಲ್ಲಿ ಸದರಿ ಅಧಿಸೂಚನೆಯ ಷೆಡ್ಯೂಲ್‌ನಲ್ಲಿರುವ ಬೆಂಗಳೂರು ನಗರ ಕಾರ್ಪೊರೇಷನ್ ವ್ಯಾಪ್ತಿಯ ಶಿವನಹಳ್ಳಿ ವೆಸ್ಟ್ ಆಫ್ ಕಾರ್ಡ್ ರಸ್ತೆ, ಬೆಂಗಳೂರು ಸ.ನಂ. 8/1 ಬಿ.ಡಿ.ಎ. ಸೈಟ್ ನಂ. 626 ರಲ್ಲಿನ ಇಂದಿರಾನಗರ ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರಿ ಪ್ರಿಲಿಮಿನರಿ ಅಧಿಸೂಚನೆಗೆ ಸಂಬಂಧಿಸಿದಂತೆ ಸಹಾಯಕ ಆಯುಕ್ತರು ಮರು ಹಂಚಿಕೆ, ಮರು ಮಂಜೂರಾತಿ ವಿಭಾಗ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಮತ್ತು ಶ್ರೀ ಜಿ.ಕೆ. ಆನಂದ್‌ಕುಮಾರ್ ಎಂಬುವವರಿಂದ ಆಕ್ಷೇಪಣೆಯು ಬಂದಿರುತ್ತದೆ. ಈ ಬಗ್ಗೆ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯವರು ವರದಿ ಸಲ್ಲಿಸಿ ಈ ಪ್ರದೇಶದಲ್ಲಿ ಗುಡಿಸಲು ಇರುವುದರಿಂದ, ಹಾಗೂ ಈ ಪ್ರದೇಶವು ಕೊಳಚೆ ಗುಣಲಕ್ಷಣಗಳನ್ನು ಹೊಂದಿರುವುದರಿಂದ, ಇವರ ಆಕ್ಷೇಪಣೆಗಳನ್ನು ತಿರಸ್ಕರಿಸಿ ಇದನ್ನು ಕೊಳಚೆ ಪ್ರದೇಶವೆಂದು ಅಂತಿಮವಾಗಿ ಘೋಷಿಸುವಂತೆ ತಿಳಿಸಿರುತ್ತಾರೆ.

ಪ್ರಶ್ನಿತ ಕೊಳಚೆ ಪ್ರದೇಶದಲ್ಲಿ ಗುಡಿಸಲು/ ಮನೆಗಳು ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಅನಾರೋಗ್ಯದ ವಾತಾವರಣ ಉಂಟಾಗಿರುತ್ತದೆ. ಸದರಿ ಪ್ರದೇಶವನ್ನು ಅಭಿವೃದ್ಧಿ ಪಡಿಸುವುದು ಅತ್ಯಗತ್ಯವಾಗಿರುತ್ತದೆ. ಆದ್ದರಿಂದ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಮೇಲ್ಕಂಡ ಕಾಯ್ದೆಯ ಸೆಕ್ಷನ್ 3 ರಡಿಯಲ್ಲಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತೇನೆ.

**ಷೆಡ್ಯೂಲ್**

ಬೆಂಗಳೂರು ನಗರ ಕಾರ್ಪೊರೇಷನ್ ವ್ಯಾಪ್ತಿಯ ಶಿವನಹಳ್ಳಿ ವೆಸ್ಟ್ ಆಫ್ ಕಾರ್ಡ್ ರಸ್ತೆ, ಬೆಂಗಳೂರು ಇಲ್ಲಿರುವ ಇಂದಿರಾನಗರ ಕೊಳಚೆ ಪ್ರದೇಶದ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರಮ ಸಂಖ್ಯೆ | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ (ಚ.ಅ.) | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1. | ಇಂದಿರಾನಗರ ಕೊಳಚೆ ಪ್ರದೇಶ, ಶಿವನಹಳ್ಳಿ ವೆಸ್ಟ್‌ಆಫ್ ಕಾರ್ಡ್ ರಸ್ತೆ, ಬೆಂಗಳೂರು. | ಟಿ.ಎಸ್. ಶೇಖರ್ ಬಿನ್ ಲೇಟ್: ಟಿ.ಪಿ. ಸದಾಶಿವಂ | 8/1 ಬಿ.ಡಿ.ಎ. ಸೈಟ್ ನಂ.626 | 41 x 96 6+87/2 | ರಸ್ತೆ | ಮನೆ ನಂ.625 | ರಸ್ತೆ | ಮನೆ ನಂ.621 ಮತ್ತು 621/ಎ |

ಪಿ.ಆರ್. 1751

**ಎಂ.ಎ. ಸಾಧಿಕ್**
ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಹಳಿಯಾಳ ವಿಭಾಗ, ಹಳಿಯಾಳ ಇವರ ನ್ಯಾಯಾಲಯ

### ಪ್ರಕಟಣೆ

**ಸಂಖ್ಯೆ: ಅರಣ್ಯ ಗುನ್ನೆ/ ವಾಹನ/ ಮುಟ್ಟುಗೋಲು/ 04-05, ಹಳಿಯಾಳ**

ಹಳಿಯಾಳ ವಿಭಾಗದಲ್ಲಿ ಅನಧಿಕೃತವಾಗಿ ಮರಮುಟ್ಟುಗಳ ಕಳ್ಳ ಸಾಗಾಣಿಕೆ ಮಾಡುತ್ತಿದ್ದ ಸಮಯದಲ್ಲಿ ಗುನ್ನೆಯಲ್ಲಿ ಒಳಗೊಂಡ ವಾಹನವನ್ನು ಜಪ್ತಿ ಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1962 ಸೆಕ್ಷನ್-71ಎ ದ ಮೇರೆಗೆ ವಿಚಾರಣೆ ನಡೆಯಿಸುವ ಕುರಿತು ಸಂಬಂಧಿಸಿದ ವಾಹನ ಮಾಲೀಕರಿಗೆ ನೋಟಿಸನ್ನು ನೀಡಿ ವಿಚಾರಣೆ ನಡೆಯಿಸಿದಾಗ ಸದರಿ ವಾಹನಗಳು ತಮ್ಮದೆಂದು ಹಾಗೂ ಅರಣ್ಯ ಗುನ್ನೆಯಲ್ಲಿ ಭಾಗಿ ಆಗಿಲ್ಲವೆಂದು ಅಧಿಕೃತ ದಾಖಲೆ ಮತ್ತು ಸಾಕ್ಷ್ಯಾಧಾರಗಳ ಮೇಲೆ ರುಜುವಾತುಪಡಿಸಲು ವಿಫಲರಾಗಿರುವುದರಿಂದ ಸದರಿ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಕುರಿತು ಈ ಪ್ರಕಟಣೆಯನ್ನು ಹೊರಡಿಸಲು ಉದ್ದೇಶಿಸಿದೆ.

ಕಾರಣ ಈ ಕೆಳಗೆ ನಮೂದಿಸಿದ ವಾಹನಗಳಿಗೆ ಸಂಬಂಧಿಸಿದ ಮಾಲೀಕರು ತಮ್ಮ ಹಕ್ಕು ಬಾಧ್ಯತೆ ಸಾಧಿಸಲು ಅಧಿಕೃತ ದಾಖಲೆ ಮತ್ತು ಸಾಕ್ಷ್ಯಾಧಾರಗಳನ್ನು ಈ ಪ್ರಕಟಣೆಯು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 30 ದಿವಸಗಳೊಳಗೆ ಈ ಪ್ರಾಧಿಕಾರಕ್ಕೆ ಹಾಜರು ಪಡಿಸತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಸದರಿ ಜಪ್ತಿ ಪಡಿಸಿಕೊಳ್ಳಲಾದ ವಾಹನಗಳನ್ನು ಕರ್ನಾಟಕ ಅರಣ್ಯ ನಿಯಮ 1963 ಸೆಕ್ಷನ್ 71(ಎ) ನೇದರಂತೆ ವಾಹನ ಹಾಗೂ ಅರಣ್ಯ ಸೊತ್ತನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

| ಅ. ನಂ. | ವಾಹನ ವಿವರ | ವಶಪಡಿಸಿಕೊಂಡ ಅರಣ್ಯ ಉತ್ಪನ್ನ | ಚಾಸಿಸ್ ನಂ. | ಇಂಜಿನ್ ನಂ. |
|---|---|---|---|---|
| 1. | MEW-8905 | ಸಾಗ ನಾಟು 21= 2.103 ಘ.ಮೀ. | ALA 92687 | ALE 72229 |
| 2. | KA-24/2190 | ಸಾಗ ನಾಟು 15= 2.921 ಘ.ಮೀ.<br>ಸೀಸಂ ನಾಟು 2= 0.270 ಘ.ಮೀ. | 38640 C 22 805909 | 497 D 21CZ2 720664 |

ಪಿ.ಆರ್. 1752

ಅಧಿಕೃತ ಅಧಿಕಾರಿಗಳು ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಹಳಿಯಾಳ ವಿಭಾಗ, ಹಳಿಯಾಳ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಇವರ ಪ್ರಾಧಿಕಾರ

**ಉಪಸ್ಥಿತರು :** ಜಿ.ಎಸ್. ಕರಿಯಪ್ಪ, ಭಾ.ಅ.ಸೇ. ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

**ಫಿರ್ಯಾದುದಾರರು:**
1. ಪೊಲೀಸ್ ಸಬ್‌ಇನ್ಸ್‌ಪೆಕ್ಟರ್, ಭರಮಸಾಗರ ಪೊಲೀಸ್ ಠಾಣೆ, ಭರಮಸಾಗರ.

**ವಿರುದ್ಧ** **ಅಪರಾಧಿಗಳು:**
1. ಶ್ರೀ ಮಹಮ್ಮದ್ ಫಯಾಜ್ ತಂದೆ ಲೇ: ಅಬ್ದುಲ್ ಖಾದರ್ ಸಾಬ್, ಸರಳಗಿ ಗ್ರಾಮ, ಹೊನ್ನಾವರ ತಾಲ್ಲೂಕು, ಕಾರವಾರ ಜಿಲ್ಲೆ.

**ವಾಹನದ ಮಾಲೀಕರು:** ಶ್ರೀ ಬಾಬಾ ಸಾಹೇಬ್ ಯಶವಂತರಾವ್ ಪಾಟೀಲ್, ಸರೋಡ್ ಗ್ರಾಮ, ಶಹವಾಡಿ ತಾಲ್ಲೂಕು, ಕೊಲ್ಹಾಪುರ ಜಿಲ್ಲೆ, ಮಹಾರಾಷ್ಟ್ರ ರಾಜ್ಯ.

**ಅರ್ಜಿದಾರರ ಪರ ವಕೀಲರು :** ಶ್ರೀ ಬಿ.ಕೆ. ರಹಮತುಲ್ಲಾ, ವಕೀಲರು, ಗಾಂಧಿಸರ್ಕಲ್, ಚಿತ್ರದುರ್ಗ.

**ಪ್ರಕರಣದ ಹಿನ್ನೆಲೆ:**

ದಿನಾಂಕ:16.04.1999ರಂದು ಭರಮಸಾಗರ ಪೊಲೀಸ್ ಠಾಣೆಯ ಸಿಬ್ಬಂದಿಯು ಠಾಣೆಯ ಜೀಪ್ ಸಂಖ್ಯೆ: ಕೆಎ-16-190ರಲ್ಲಿ ಎನ್‌ಹೆಚ್-4 ರಸ್ತೆಯ ಗಸ್ತು ಕಾರ್ಯ ನಡೆಸುತ್ತಾ, ದಿನಾಂಕ: 17.04.1999ರ ಬೆಳಗಿನ ಜಾವ ಸುಮಾರು 2.30ರ ಸಮಯದಲ್ಲಿ ಬೆನ್ನೂರು ಸರ್ಕಲ್‌ನಿಂದ ಚಿಕ್ಕ ಬೆನ್ನೂರ್ ಕಡೆ ಬರುತ್ತಿರುವಾಗ ದಾವಣಗೆರೆ ಕಡೆಯಿಂದ ಬರುತ್ತಿದ್ದ ಜೀಪ್‌ನಲ್ಲಿದ್ದವರು ಗಸ್ತು ವಾಹನವನ್ನು ಕಂಡು ಏಕಾಏಕಿ ಚಿಕ್ಕಬೆನ್ನೂರು ಎಡಿ ಕಾಲೋನಿ ಕಡೆ ವಾಹನವನ್ನು ವೇಗವಾಗಿ ತಿರುಗಿಸಿ, ವಾಹನವನ್ನು ನಿಲ್ಲಿಸಿ ಇಳಿದು ಓಡಿ ತಪ್ಪಿಸಿಕೊಳ್ಳಲು ಪ್ರಯತ್ನಿಸಿದಾಗ ಪೊಲೀಸ್ ಸಿಬ್ಬಂದಿ ಅವರನ್ನು ಬೆನ್ನಟ್ಟಿ ಒಬ್ಬನನ್ನು ಹಿಡಿಯುವಲ್ಲಿ ಸಫಲವಾಯಿತು. ಸಿಕ್ಕಲ್ಪಟ್ಟವನ ಹೆಸರು ವಿಚಾರಿಸಿದಾಗ, ಆತನ ಹೆಸರು ಮಹಮ್ಮದ್ ಫಯಾಜ್ ತಂದೆ ಲೇ: ಅಬ್ದುಲ್ ಖಾದರ್ ಸಾಬ್ ಎಂದು ತಿಳಿದು ಬಂದಿತು. ತಪಾಸಿಸಲಾಗಿ ಜೀಪ್ ಮಹೇಂದ್ರ ಮಾರ್ಶಲ್ ಎಂಬುದಾಗಿಯೂ ರಿಜಿಸ್ಟ್ರೇಶನ್ ಸಂಖ್ಯೆ: ಎಂಹೆಚ್-10-ಸಿ-4718 ಎಂಬುದಾಗಿ ಹಾಗೂ ಜೀಪಿನ ಹಿಂಭಾಗದಲ್ಲಿ ಗಂಧದ ತುಂಡುಗಳು ಕಂಡು ಬಂದಿರುತ್ತವೆ.

ನಂತರ ಪಂಚರ ಸಮಕ್ಷಮ ಎಂಹೆಚ್-10-ಸಿ-4718 ಮಹೇಂದ್ರ ಮಾರ್ಶಲ್ ಜೀಪನ್ನು ಹಾಗೂ ಜೀಪಿನಲ್ಲಿದ್ದ ಶ್ರೀಗಂಧದ ತುಂಡುಗಳ ಉದ್ದ, ಸುತ್ತಳತೆ, ತೂಕ ಸಮೇತ ಅಳತೆ ಮಾಡಿ ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್-62ರ ಪ್ರಕಾರ ಎಲ್ಲಾ ವಿಧಿ ವಿಧಾನಗಳನ್ನು ಅನುಸರಿಸಿ ಮಹಜರ್ ನಡೆಸಿ ಕ್ರ.ಸಂ.1 ರಿಂದ 250ರ ವರೆಗೆ ಶ್ರೀಗಂಧದ ತುಂಡುಗಳ ಮೇಲೆ ಕೆಂಪು ವಾರ್ನಿಶ್ ಬಣ್ಣದಿಂದ ನಮೂದಿಸಲಾಗಿದೆ. ಚಿಕ್ಕ ತುಂಡುಗಳ ಮೇಲೆ ಸಂಖ್ಯೆಯನ್ನು ಬರೆದಿರುವುದಿಲ್ಲ. ಶ್ರೀಗಂಧದ ಒಟ್ಟು ತೂಕ 230 ಕೆಜಿ ಇರುತ್ತದೆ.

ನಂತರ ಎಂಹೆಚ್-10-ಸಿ-4718 ರಿಜಿಸ್ಟ್ರೇಶನ್ ನಂಬರಿನ ಮಹೇಂದ್ರ ಮಾರ್ಶಲ್ ಜೀಪನ್ನು ಮತ್ತು 230 ಕೆಜಿ ಶ್ರೀಗಂಧವನ್ನು ಅಮಾನತ್ತುಪಡಿಸಿಕೊಂಡು ಕಲಂ 86, 87 ಕರ್ನಾಟಕ ಅರಣ್ಯ ಕಾಯ್ದೆ -1963 ರೆಡ್‌ವಿತ್-379 ಐಪಿಸಿ ಪ್ರಕಾರ ಕೇಸು ದಾಖಲು ಮಾಡಿಕೊಂಡು ಪ್ರಥಮ ವರ್ತಮಾನ ವರದಿಯನ್ನು ಸಂಬಂಧಪಟ್ಟ ನ್ಯಾಯಾಲಯಕ್ಕೆ ಸಲ್ಲಿಸಿ ಆರೋಪಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ಈ ಮಹಜರ್ ಕ್ರಮವನ್ನು ದಿನಾಂಕ: 17.04.2004ರಂದು ಬೆಳಿಗ್ಗೆ 7.30 ರಿಂದ 10.00 ಗಂಟೆಯವರೆಗೆ ಜರುಗಿಸಿರುತ್ತಾರೆ. ತದನಂತರ ಅಮಾನತ್ತುಪಡಿಸಿಕೊಂಡಿರುವ ಮಹೇಂದ್ರ ಮಾರ್ಶಲ್ ಜೀಪನ್ನು ಮತ್ತು ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ 230 ಕೆಜಿ ಶ್ರೀಗಂಧವನ್ನು ಈ ಪ್ರಾಧಿಕಾರಕ್ಕೆ ಹಾಜರುಪಡಿಸಿ ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್ 71(ಎ) ಪ್ರಕಾರ ಮುಂದಿನ ಕ್ರಮ ಜರುಗಿಸಲು ಕೋರಿರುತ್ತಾರೆ.

ಈ ಪ್ರಾಧಿಕಾರವು ಸದರಿ ಜೀಪನ್ನು ಮತ್ತು 230 ಕೆಜಿ ಶ್ರೀಗಂಧವನ್ನು ತನ್ನ ವಶದಲ್ಲಿಟ್ಟುಕೊಂಡಿರುವಂತೆ ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ವಲಯ, ಚಿತ್ರದುರ್ಗ ಇವರಿಗೆ ಸೂಚಿಸಿರುತ್ತದೆ. ಅಮಾನತ್ತುಪಡಿಸಿಕೊಂಡಿರುವ ಜೀಪಿನ ಮಾಲೀಕರ ವಿವರ ಮತ್ತು 'ಬಿ' ರಿಜಿಸ್ಟರ್‌ನ ಎಕ್ಸ್‌ಟ್ರಾಕ್ಟ್‌ನ್ನು ಒದಗಿಸಲು ಡೆಪ್ಯುಟಿ ರೀಜನಲ್ ಟ್ರಾನ್ಸ್‌ಪೋರ್ಟ್ ಆಫೀಸರ್, ಸಾಂಗ್ಲಿ, ಮಹಾರಾಷ್ಟ್ರ ಇವರಿಗೆ ಪತ್ರ ಬರೆಯಲಾಗಿತ್ತು. ಸದರಿಯವರು ವಾಹನದ 'ಬಿ' ರಿಜಿಸ್ಟರ್ ಎಕ್ಸ್‌ಟ್ರಾಕ್ಟನ್ನು ಸಲ್ಲಿಸಿದ್ದು, ಮಹೇಂದ್ರ ಜೀಪಿನ ಇಂಜಿನ್ ನಂ. ಡಿಡಬ್ಲ್ಯೂ-121689, ಛಾಸೀಸ್ ನಂ.CL-55OMD-2L,W-DW-121689 ಇರುತ್ತದೆ. ಇದು ಶ್ರೀ ಬಾಬಾ ಸಾಹೆಬ್ ಯಶವಂತ ಪಾಟೀಲ್, ಯಶವಂತ ನಗರ, ಚಿಖಾಲಿ, ಶಿರಾಲಾ ತಾಲ್ಲೂಕು, ಸಾಂಗ್ಲಿ ಜಿಲ್ಲೆ ಇವರ ಹೆಸರಿನಲ್ಲಿರುತ್ತದೆ.

ಈ ಪ್ರಾಧಿಕಾರವು ಡೆಪ್ಯುಟಿ ರೀಜನಲ್ ಟ್ರಾನ್ಸ್‌ಪೋರ್ಟ್ ಆಫೀಸರ್, ಸಾಂಗ್ಲಿ ರವರು ಸಲ್ಲಿಸಿದ 'ಬಿ' ರಿಜಿಸ್ಟರ್ ಎಕ್ಸ್‌ಟ್ರಾಕ್ಟ್‌ನನ್ವಯ ಶ್ರೀ ಬಾಬಾ ಸಾಹೆಬ್ ಯಶವಂತ ಪಾಟೀಲ್ ಇವರಿಗೆ ಸದರಿ ವಾಹನವು ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದರಿಂದ ವಾಹನವನ್ನು ಸರ್ಕಾರದ ಪರವಾಗಿ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕೆ ಕಾರಣಗಳನ್ನು ನೀಡುವಂತೆ 15 ದಿನಗಳ ಕಾಲಾವಕಾಶ ನೀಡಿ ನೋಟೀಸ್ ಜಾರಿ ಮಾಡಲಾಗಿತ್ತು.

ವಾಹನದ ಮಾಲಿಕರಾದ ಶ್ರೀ ಬಾಬಾ ಸಾಹೆಬ್ ಯಶವಂತ ಪಾಟೀಲ್ ಇವರು ಶ್ರೀ ಬಿ.ಕೆ. ರಹಮತುಲ್ಲಾ, ವಕೀಲರು, ಗಾಂಧಿ ಸರ್ಕಲ್, ಚಿತ್ರದುರ್ಗ ಇವರ ಮುಖಾಂತರ ಮನವಿ ಸಲ್ಲಿಸಿ ಸದರಿ ವಾಹನವನ್ನು ಮಧ್ಯಂತರ ವಶಕ್ಕೆ ನೀಡುವಂತೆ ಕೋರಿರುತ್ತಾರೆ. ಸದರಿಯವರ ಮನವಿಯನ್ನು ಈ ಪ್ರಾಧಿಕಾರವು ಪರಿಶೀಲಿಸಿ ದಿನಾಂಕ: 19.05.1999ರ ತನ್ನ ಆದೇಶದಲ್ಲಿ ವಾಹನವನ್ನು ಮಾಲೀಕರ ವಶಕ್ಕೆ ತಾತ್ಕಾಲಿಕವಾಗಿ ಕೆಲವು ಷರತ್ತುಗಳನ್ನು ವಿಧಿಸಿ ಬಿಡುಗಡೆ ಮಾಡಿರುತ್ತದೆ.

ನಂತರ ಈ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ದಿನಾಂಕ: 20.12.2001, 09.01.2002, 25.02.2002, 04.03.2002, 19.02.2004, 24.02.2004, 25.02.2004, 09.03.2004, 17.03.2004, 24.03.2004, 28.04.2004, 27.07.2004, 10.08.2004, 28.08.2004 ಮತ್ತು 21.09.2004 ರಂದು ಸಾಕ್ಷಿಗಳನ್ನು ವಿಚಾರಣೆ ನಡೆಸಲಾಯಿತು.

**ಅಭಿಯೋಜನೆ ಪರವಾಗಿ ಸಾಕ್ಷಿಗಳು:**

| | | |
|---|---|---|
| 1. | ಶ್ರೀ ಪಿ.ಸಿ. ಬಸವರಾಜು ಬಿನ್ ಚನ್ನಬಸಪ್ಪ | PW-1 |
| 2. | ಶ್ರೀ ಹೆಚ್.ಎನ್. ಕಲ್ಲಪ್ಪ ಬಿನ್ ಹೆಚ್.ಎನ್. ನಿಂಗಪ್ಪ | PW-2 |
| 3. | ಶ್ರೀ ಅಬ್ದುಲ್ ಸುಭಾನ್ ಬಿನ್ ಅಕ್ಬರ್ ಸಾಬ್ | PW-3 |
| 4. | ಶ್ರೀ ಎಲ್. ಚನ್ನೇಗೌಡ ಬಿನ್ ಲಿಂಗೇಗೌಡ | PW-4 |
| 5. | ಶ್ರೀ ಹೆಚ್. ಆಂಜನೇಯ ಬಿನ್ ಹನುಮಂತಬೋವಿ | PW-5 |
| 6. | ಶ್ರೀ ಸೈಯದ್ ಇಸಾಕ್ ಬಿನ್ ಸೈಯದ್ ಹಸನ್ | PW-6 |

**ಪ್ರತಿವಾದಿ (ಅರ್ಜಿದಾರರ) ಪರವಾಗಿ ಸಾಕ್ಷಿಗಳು:**

1. ಶ್ರೀ ಸತ್ಯಜಿತ್ ಬಾಬಾ ಸಾಹೆಬ್ ಪಾಟೀಲ್ ಬಿನ್ ಶ್ರೀ ಬಾಬಾ ಸಾಬ್ ಯಶವಂತ್ ರಾವ್ ಪಾಟೀಲ್

ಮೇಲ್ಕಂಡ ಸಾಕ್ಷಿದಾರರುಗಳ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಯಿತು. ಅಭಿಯೋಜನೆ ಪರ ಸಹಾಯಕ ಅಭಿಯೋಜಕ ನಿರ್ದೇಶಕರು ಮತ್ತು ಪ್ರತಿವಾದಿಗಳ ಪರ ವಕೀಲರು ಇವರು ಮಂಡಿಸಿದ ಲಿಖಿತ ವಾದಗಳನ್ನು ಕೂಲಂಕುಶವಾಗಿ ಪರಿಶೀಲಿಸಿ, ಸೂಕ್ತ ನಿರ್ಣಯ ನೀಡಲು ಈ ಕೆಳಕಂಡ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಯಿತು.

**ಅಂಶ-1**

ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಳ್ಳಲಾದ ವಾಹನ ಮಹೇಂದ್ರ ಮಾರ್ಶಲ್ ಜೀಪ್ ಸಂಖ್ಯೆ: ಎಂಹೆಚ್-10-ಸಿ-4718ನ್ನು ಶ್ರೀಗಂಧದ ಸಮೇತ ಅಮಾನತ್ತುಪಡಿಸಲಾಗಿದೆಯೇ? ಅಮಾನತ್ತುಪಡಿಸುವಾಗ ಕರ್ನಾಟಕ ಅರಣ್ಯ ಕಾಯ್ದೆ-1963ರ ಕಲಂ -62ರ ಪ್ರಕಾರ ಕ್ರಮಬದ್ಧವಾಗಿ ಅಮಾನತ್ತುಪಡಿಸಲಾಗಿದೆಯೇ?

**ಅಂಶ-2**

ಅಮಾನತ್ತುಪಡಿಸಿಕೊಂಡ ಮಹೇಂದ್ರ ಮಾರ್ಶಲ್ ಜೀಪಿನಲ್ಲಿದ್ದ ಮಾಲು ಸರ್ಕಾರದ ಸ್ವತ್ತು ಎಂದು ಘೋಷಿಸಲಾಗಿರುವ ಶ್ರೀಗಂಧವೆ?

**ಅಂಶ-3**

ಅಮಾನತ್ತು ಪಡಿಸಲಾಗಿರುವ ಮಹೇಂದ್ರ ಮಾರ್ಶಲ್ ಜೀಪಿನ ಮಾಲಿಕರು ವಾಹನವನ್ನು ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ಬಳಸಲಾಗಿರುವುದಿಲ್ಲ ಎಂಬುದನ್ನು ಸಾಬೀತುಪಡಿಸಿರುವರೆ ಅಥವಾ ವಾಹನವು ಶ್ರೀಗಂಧದ ಕಳ್ಳಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲಿಕರು ಎಲ್ಲಾ ರೀತಿ ಮುಂಜಾಗ್ರತಾ ಕ್ರಮ ಕೈಗೊಂಡಿರುವರೆ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ-1 ಸಕಾರಾತ್ಮಕ

ಅಂಶ-2 ಸಕಾರಾತ್ಮಕ

ಅಂಶ-3 ನಕಾರಾತ್ಮಕ

**ಕಾರಣಗಳನ್ನು ಈ ಕೆಳಗೆ ವಿವರಿಸಲಾಗಿದೆ**

**ಅಂಶ-1**

ಶ್ರೀ ಅಬ್ದುಲ್ ಸುಬಾನ್, ಪೊಲೀಸ್ ಅಸಿಸ್ಟೆಂಟ್ ಸಬ್ ಇನ್ಸ್‌ಪೆಕ್ಟರ್, ಭರಮಸಾಗರ ಪೊಲೀಸ್ ಠಾಣೆ, ಭರಮಸಾಗರ ಇವರು ರಾಷ್ಟ್ರೀಯ ಹೆದ್ದಾರಿ-4ರಲ್ಲಿ ಗಸ್ತು ಮಾಡುತ್ತಿದ್ದಾಗ ದಿನಾಂಕ: 17.04.1999ರ ರಾತ್ರಿ ಸುಮಾರು 2.30 ಸಮಯದಲ್ಲಿ ಕಾತ್ರಾಳು ಕೆರೆಯಿಂದ ಹೋಗುತ್ತಿದ್ದಾಗ ಚಿಕ್ಕಬೆನ್ನೂರು ಗ್ರಾಮದ ಹತ್ತಿರ ಜೀಪ್ ಒಂದು ಗಸ್ತು ವಾಹನವನ್ನು ನೋಡಿದ ತಕ್ಷಣ ಚಿಕ್ಕಬೆನ್ನೂರು ಗ್ರಾಮದ ಎಡಿ ಕಾಲೋನಿ ಕಡೆ ತಿರುಗಿದಾಗ ಅನುಮಾನದಿಂದ ಹಿಂಬಾಲಿಸಿದಾಗ ಜೀಪಿನಲ್ಲಿದ್ದ ಜನರು ಇಳಿದು ಓಡಲು ಪ್ರಾರಂಭಿಸಿದಾಗ, ಒಬ್ಬನನ್ನು ಹಿಡಿದು ವಶಕ್ಕೆ ತೆಗೆದುಕೊಳ್ಳಲಾಯಿತು. ಅವನನ್ನು ವಿಚಾರಿಸಲಾಗಿ ಅವನ ಪೂರ್ಣ ಹೆಸರು ಮಹಮ್ಮದ್ ಫಯಾಜ್ ತಂದೆ ಲೇ: ಅಬ್ದುಲ್‌ಖಾದರ್ ಸಾಬ್ ಎಂದು, ಓಡಿ ಹೋದವರ ಹೆಸರುಗಳು ಶಫೀ, ಮುಕ್ತಿಯಾರ್ ಮತ್ತು ರಮೇಶ್ ಎಂದು ತಿಳಿದು ಬಂದಿದೆ. ವಶಕ್ಕೆ ತೆಗೆದುಕೊಂಡ ವ್ಯಕ್ತಿಯೊಂದಿಗೆ ವಾಹನದ ಬಳಿ ಬಂದು ವಾಹನದಲ್ಲಿ ಏನಿದೆ ಎಂದು ವಿಚಾರಿಸಲಾಗಿ, ಅದರಲ್ಲಿ ಶ್ರೀಗಂಧದ ತುಂಡುಗಳು ಇವೆ ಎಂಬುದಾಗಿ ತಿಳಿಸಿದರು. ನಂತರ ಜೀಪನ್ನು ಪರಿಶೀಲಿಸಲಾಗಿ ಜೀಪು ಮಹೇಂದ್ರ ಮಾರ್ಶಲ್ ಹಾಗೂ ಅದರ ರಿಜಿಸ್ಟ್ರೇಶನ್ ಸಂಖ್ಯೆ: ಎಂಹೆಚ್-10-ಸಿ-4718 ಎಂಬುದಾಗಿ ತಿಳಿಯಿತು. ಜೀಪಿನಲ್ಲಿ ಶ್ರೀಗಂಧದ ತುಂಡುಗಳು ಇದ್ದದ್ದು ಕಾಣಿಸಿತು. ಆಗ ಊರಿನ ಜನ ಜೀಪಿನ ಸುತ್ತಾ ಸೇರಿದರು ನಂತರ ವಶಕ್ಕೆ ತೆಗೆದುಕೊಂಡ ವ್ಯಕ್ತಿಯನ್ನು ವಿಚಾರಿಸಲಾಗಿ ಶ್ರೀಗಂಧದ ತುಂಡುಗಳನ್ನು ರಿಪ್ಪನ್‌ಪೇಟೆ ಹತ್ತಿರ ಇರುವ ಕಾಡಿನಿಂದ ತಂದಿರುವುದಾಗಿ ಮತ್ತು ಶ್ರೀಗಂಧದ ತುಂಡುಗಳನ್ನು ಆಂಧ್ರ ಪ್ರದೇಶದ ಅಮರಾಪುರ ಶ್ರೀಗಂಧದ ಫ್ಯಾಕ್ಟರಿಗೆ ಸಾಗಿಸುತ್ತಿರುವುದಾಗಿ ತಿಳಿಸಿದರು. ಶ್ರೀಗಂಧದ ಸಾಗಾಣಿಕೆಗಾಗಿ ಅಧಿಕೃತ ಪರವಾನಿಗೆ ಇದೆಯೇ ಎಂದು ವಿಚಾರಿಸಲಾಗಿ, ಆತನು ಯಾವುದೇ ಅಧಿಕೃತ ಪರವಾನಗಿ ಇಲ್ಲವೆಂದು ತಿಳಿಸಿದಾಗ, ಸದರಿ ಅಸಿಸ್ಟೆಂಟ್ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ರವರು ನಿಸ್ತಂತು ಮೂಲಕ ಭರಮಸಾಗರ ಪೊಲೀಸ್ ಠಾಣೆ ಸಬ್ ಇನ್ಸ್‌ಪೆಕ್ಟರ್ ರವರಿಗೆ ಮಾಹಿತಿ ನೀಡಿ ವಾಹನವನ್ನು ಹಿಡಿದ ಸ್ಥಳದಲ್ಲಿ ಕತ್ತಲು ಇದ್ದುದರಿಂದ ಸ್ಥಳದಲ್ಲಿ ಯಾವುದೇ ಮಹಜರ್ ನಡೆಸದೆ ಸ್ಥಳದಲ್ಲಿ ದೊರೆತ ಜೀಪು, ಆರೋಪಿ ಮತ್ತು ಶ್ರೀಗಂಧವನ್ನು ಭರಮಸಾಗರ ಪೊಲೀಸ್ ಠಾಣೆಯ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್, ಶ್ರೀ ಸೈಯದ್ ಇಸಾಕ್ ರವರ ಮುಂದೆ ಮುಂದಿನ ಕ್ರಮಕ್ಕಾಗಿ ಹಾಜರುಪಡಿಸಿ ವರದಿ ನೀಡಿರುತ್ತಾರೆ. ಆಗ ಸಮಯ ಬೆಳಗಿನ ಜಾವ 6.30 ಸಮಯವಾಗಿತ್ತು.

ಶ್ರೀ ಸೈಯದ್ ಇಸಾಕ್, ಪೊಲೀಸ್ ಸಬ್‌ಇನ್ಸ್‌ಪೆಕ್ಟರ್, ಭರಮಸಾಗರ ಪೊಲೀಸ್ ಠಾಣೆ, ಭರಮಸಾಗರ ಇವರು ಶ್ರೀ ಅಬ್ದುಲ್ ಸುಬಾನ್ ಸಹಾಯಕ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ ಇವರು ನೀಡಿದ ವರದಿಯನ್ವಯ ಭರಮಸಾಗರ ಪೊಲೀಸ್ ಠಾಣೆ ಗುನ್ನೆ ಸಂಖ್ಯೆ: 102/99 ರಲಂ 379 ಐಪಿಸಿ ಮತ್ತು ಕಲಂ 86, 87 ಕರ್ನಾಟಕ ಅರಣ್ಯ ಕಾಯ್ದೆ ಪ್ರಕಾರ ಪ್ರಕರಣ ದಾಖಲಿಸಿಕೊಂಡಿರುತ್ತಾರೆ.

ಠಾಣೆಗೆ ಪಂಚರನ್ನು ಬರಮಾಡಿಕೊಂಡು ಪಂಚರ ಸಮಕ್ಷಮ ಜೀಪಿನಲ್ಲಿದ್ದ ಶ್ರೀಗಂಧದ ತುಂಡುಗಳನ್ನು ಪರಿಶೀಲಿಸಿ ತೂಕ ಮಾಡಿ ತೂಕದೊಂದಿಗೆ ಕೆಂಪು ಬಣ್ಣದಲ್ಲಿ ಕ್ರಮ ಸಂ.1 ರಿಂದ 250ರವರೆಗೆ ನಮೂದಿಸಿ ಪಂಚನಾಮೆಯನ್ನು ಮಾಡಿರುತ್ತಾರೆ. ಶ್ರೀಗಂಧದ ತುಂಡುಗಳು ಮತ್ತು ಚಕ್ಕೆಗಳ ಒಟ್ಟು ತೂಕ 230 ಕೆಜಿ ಆಗಿರುತ್ತದೆ. ನಂತರ ವಾಹನ ಮಹೇಂದ್ರ ಮಾರ್ಶಲ್ ಜೀಪು ಸಂಖ್ಯೆ: ಎಂಹೆಚ್-10-ಸಿ-4718, 230 ಕೆಜಿ ಶ್ರೀಗಂಧವನ್ನು ಅಮಾನತ್ತುಪಡಿಸಿಕೊಂಡು ಆರೋಪಿಯನ್ನು ದಸ್ತಗಿರಿ ಮಾಡಿರುತ್ತಾರೆ. ನಂತರ ಅಮಾನತ್ತುಪಡಿಸಿಕೊಂಡ ಮಾಲನ್ನು ಠಾಣಾ ಮಾಲುಪಟ್ಟಿ ಸಂಖ್ಯೆ: 51/99ರಲ್ಲಿ ನಮೂದಿಸಿರುತ್ತಾರೆ. ಪ್ರಥಮ ಮಾಹಿತಿ ವರದಿಯೊಂದಿಗೆ ಆರೋಪಿಯನ್ನು ನ್ಯಾಯಾಲಯದ ಮುಂದೆ ಹಾಜರುಪಡಿಸಿರುತ್ತಾರೆ.

ಒಟ್ಟಿನಲ್ಲಿ ವಾಹನ ಮಹೇಂದ್ರ ಮಾರ್ಶಲ್ ಜೀಪು ಸಂಖ್ಯೆ: ಎಂಹೆಚ್-10-ಸಿ-4718 ಮತ್ತು ಶ್ರೀಗಂಧವನ್ನು ಅಮಾನತ್ತುಪಡಿಸುವಾಗ ಹಾಗೂ ಮಹಜರ್ ನಡೆಸುವಾಗ ಕಲಂ 62 ಕರ್ನಾಟಕ ಅರಣ್ಯ ಕಾಯ್ದೆ- 1963ರ ಪ್ರಕಾರ ನಿಯಮಗಳನ್ನು ಪಾಲಿಸಿರುತ್ತಾರೆ.

ಸದರಿ ಪ್ರಕರಣವು ಅರಣ್ಯ ಕಾಯ್ದೆಗಳ ಉಲ್ಲಂಘನೆಗೆ ಸಂಬಂಧಪಟ್ಟದ್ದರಿಂದ ಮುಂದಿನ ನಡವಳಿಕೆಗಳನ್ನು ನಡೆಸುವ ಬಗ್ಗೆ ವಾಹನ ಮತ್ತು ಅದರಲ್ಲಿದ್ದ ಶ್ರೀಗಂಧವನ್ನು ಈ ಪ್ರಾಧಿಕಾರಕ್ಕೆ ಒಪ್ಪಿಸಿರುತ್ತಾರೆ. ಅಮಾನತ್ತುಪಡಿಸಿಕೊಳ್ಳಲಾದ ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ಇವರು ಪರಿಶೀಲಿಸಿ, ಶ್ರೀಗಂಧವೆಂದು ದೃಢೀಕರಿಸಿರುತ್ತಾರೆ.

ವಿಚಾರಣಾ ಸಮಯದಲ್ಲಿ ಪ್ರಾಸಿಕ್ಯೂಶನ್ ಸಾಕ್ಷಿ 6 ಶ್ರೀ ಸೈಯದ್ ಇಸಾಕ್, ಭರಮಸಾಗರ ಪೊಲೀಸ್ ಠಾಣೆಯ ಸಬ್‌ಇನ್ಸ್‌ಪೆಕ್ಟರ್ ರವರು ಮಹಜರ್ ನಿಶಾನೆ-ಪಿ1 ಮತ್ತು ಅದರಲ್ಲಿದ್ದ ಸಹಿ ನಿಶಾನೆ-ಪಿ1(ಸಿ) ಎಂಬುದನ್ನು ಗುರುತಿಸಿರುತ್ತಾರೆ ಹಾಗೂ ಅಮಾನತ್ತುಪಡಿಸಿಕೊಂಡ ಜೀಪು, ಶ್ರೀಗಂಧದ ತುಂಡುಗಳು, ಚಕ್ಕೆ ಹಾಗೂ ಚಿಕ್ಕ ಪುಸ್ತಕವನ್ನು ನೋಡಿದರೆ ಗುರುತಿಸುತ್ತೇನೆಂದು ಸಾಕ್ಷಿ ನುಡಿದಿರುತ್ತಾರೆ. ಹಾಗೂ ಅದೇ ಜೀಪು ಈ ಪ್ರಾಧಿಕಾರದ ಮುಂದೆ ಇರುವುದಾಗಿ ಸಾಕ್ಷಿ ಹೇಳಿರುತ್ತಾರೆ. ಸದರಿ ಜೀಪು ಮುದ್ದೇಮಾಲು-1 ಎಂದು ಗುರುತಿಸಲಾಗಿದೆ. ಚಿಕ್ಕ ಪುಸ್ತಕವನ್ನು ಗುರುತಿಸಿದ್ದು, ಅದನ್ನು ನಿಶಾನೆ -ಪಿ4 ಎಂದು ಗುರುತಿಸಲಾಯಿತು. ಶ್ರೀಗಂಧದ ಸ್ಯಾಂಪಲ್ ತುಂಡನ್ನು ಗುರುತಿಸಿದರು. ಸದರಿ ತುಂಡನ್ನು ಮುದ್ದೇ ಮಾಲು-2 ಎಂದು ಗುರುತಿಸಲಾಯಿತು. ಮಾಲು ಪಟ್ಟಿಯನ್ನು ನಿಶಾನೆ-ಪಿ5 ಎಂದು ಗುರುತಿಸಲಾಗಿದೆ. ಶ್ರೀ ಅಬ್ದುಲ್ ಸುಬಾನ್, ಅಸಿಸ್ಟೆಂಟ್ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಅವರ ವರದಿಯನ್ನು ಗುರುತಿಸಿದ್ದು, ಅದನ್ನು ನಿಶಾನೆ- ಪಿ2 ಎಂದು ಗುರುತಿಸಲಾಗಿದೆ. ಪ್ರಥಮ ವರ್ತಮಾನ ವರದಿಯನ್ನು ಗುರುತಿಸಿದ್ದು, ಅದನ್ನು ನಿಶಾನೆ-ಪಿ6 ಎಂದು ಗುರುತಿಸಿದ್ದು ಅದರಲ್ಲಿದ್ದ ಅವರ ಸಹಿಯನ್ನು ನಿಶಾನೆ-ಪಿ6(ಎ) ಎಂದು ಗುರುತಿಸಲಾಗಿದೆ. ಪ್ರಾಧಿಕಾರಕ್ಕೆ ಅವರು ಸಲ್ಲಿಸಿದ್ದ ವರದಿಯನ್ನು ಗುರುತಿಸಿದ್ದು, ಅದನ್ನು ನಿಶಾನೆ-ಪಿ7 ಎಂದು ಗುರುತಿಸಲಾಗಿದೆ. ಅದರಲ್ಲಿದ್ದ ಅವರ ಸಹಿಯನ್ನು ಗುರುತಿಸಿದ್ದು ಅದನ್ನು ನಿಶಾನೆ-ಪಿ7(ಎ) ಎಂದು ಗುರುತಿಸಲಾಗಿದೆ. ತನಿಖೆ ಪೂರ್ಣಗೊಂಡ ನಂತರ ಅವರು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದ ಆಪಾದನೆ ಪಟ್ಟಿಯ ಪ್ರತಿ ಮತ್ತು ವರದಿಯನ್ನು ಅದರಲ್ಲಿದ್ದ ಅವರ ಸಹಿಯನ್ನು ಗುರುತಿಸಿದರು. ಅವುಗಳನ್ನು ಅನುಕ್ರಮವಾಗಿ ನಿಶಾನೆ ಪಿ8 ಮತ್ತು ಪಿ9 ಎಂದು ಗುರುತಿಸಲಾಯಿತು.

ಸದರಿ ಸಾಕ್ಷಿದಾರರನ್ನು ಶ್ರೀ ಬಿ.ಕೆ. ರಹಮತುಲ್ಲಾ, ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ ಪ್ರಥಮ ವರ್ತಮಾನ ವರದಿಯಲ್ಲಿ ವಾಹನದ ಮಾಲಿಕರ ಹೆಸರು ಮತ್ತು ವಿಳಾಸವನ್ನು ನಮೂದಿಸಿಲ್ಲವೆಂದು ತಿಳಿಸಿರುತ್ತಾರೆ. ಆರೋಪಿ ಫಯಾಜ್ ಕೊಟ್ಟ ಸ್ವಇಚ್ಛಾ ಹೇಳಿಕೆಯಲ್ಲಿ ಮುಕ್ತಿಯಾರ್ ಎಂಬುವನು ತನ್ನ ಹತ್ತಿರವಿರುವ ಜೀಪಿನಲ್ಲಿ ನಾನು, ನೀನು ಮತ್ತು ಸ್ನೇಹಿತರಾದ ಶಫಿ, ರಮೇಶ್ 4 ಜನ ಸೇರಿ ಶ್ರೀಗಂಧದ ತುಂಡುಗಳನ್ನು ಆಂಧ್ರದ ಹತ್ತಿರವಿರುವ ಅಮರಾಪುರದಲ್ಲಿ ಮಾರಾಟ ಮಾಡಿ ಬಂದ ಹಣದಲ್ಲಿ ಪಾಲುಮಾಡುವುದಾಗಿ ಹೇಳಿರುವುದು ಸರಿ ಎಂದು ಹೇಳಿಕೆ ಕೊಟ್ಟಿರುತ್ತಾರೆ. ಆರೋಪಿ ಮಹಮ್ಮದ್ ಫಯಾಜ್ ಈ ಕೇಸಿನಲ್ಲಿ ಅಮಾನತ್ತುಪಡಿಸಿಕೊಂಡ ಜೀಪನ್ನು ಕಳ್ಳತನ ಮಾಡಿಕೊಂಡು, ಮಾಲಿಕರ ಗಮನವಿಲ್ಲದೆ ಕದ್ದು ಶ್ರೀಗಂಧದ ಕಳ್ಳಸಾಗಾಣಿಕೆಗೆ ಉಪಯೋಗಿಸಿರುತ್ತಾರೆ ಎಂಬುದು ಹಾಗೂ ಶಹಪಾಡಿ ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ: 20/99 ಭಾರತೀಯ ದಂಡ ಸಂಹಿತೆ ಕಲಂ-379 ರಡಿಯಲ್ಲಿ ಪ್ರಕರಣ ದಾಖಲಾಗಿದ್ದು, ನಂತರ ತನಿಖಾಧಿಕಾರಿಗಳು ತನಿಖೆ ನಡೆಸಿ ಆರೋಪಿ ಮಹಮ್ಮದ್ ಫಯಾಜ್ ವಿರುದ್ಧ ಸಂಬಂಧಪಟ್ಟ ನ್ಯಾಯಾಲಯದಲ್ಲಿ ಸಿಸಿ ಸಂಖ್ಯೆ: 18/02ರಲ್ಲಿ ನೊಂದಾಯಿಸಿ ಪ್ರಕರಣವನ್ನು ವಿಚಾರಣೆಗೆ ಕೈಗೆತ್ತಿಕೊಂಡಿರುವ ವಿಚಾರ

ತನಗೆ ಗೊತ್ತಿಲ್ಲ ಎಂದು ತಿಳಿಸಿರುತ್ತಾರೆ. ಈ ಕೇಸಿನ ಆರೋಪಿತರಿಗೂ ಮತ್ತು ವಾಹನದ ಮಾಲಿಕರಿಗೂ ಯಾವುದೇ ರೀತಿಯ ಸಂಬಂಧ ಇಲ್ಲ ಎಂದರೆ ಅದು ನನಗೆ ಗೊತ್ತಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಸ್ಥಳದಲ್ಲಿ ಮಹಜರ್ ಮಾಡಿಲ್ಲ, ಶ್ರೀಗಂಧವನ್ನು ಅಮಾನತ್ತುಪಡಿಸಿಲ್ಲ, ಆರೋಪಿಯ ಮೇಲೆ ಸುಳ್ಳು ಪ್ರಕರಣ ದಾಖಲಿಸಿರುತ್ತೇನೆ ಎನ್ನುವುದು ಸುಳ್ಳು ಎಂದು ತಿಳಿಸಿರುತ್ತಾರೆ.

**ಪ್ರಾಸಿಕ್ಯೂಶನ್ ಸಾಕ್ಷಿ:** ಪಿ3 ಶ್ರೀ ಅಬ್ದುಲ್ ಸುಬಾನ್ ಇವರನ್ನು ಸಹಾಯಕ ಅಭಿಯೋಜಕ ನಿರ್ದೇಶಕರು ನಡೆಸಿದ ಮುಖ್ಯ ವಿಚಾರಣೆಯಲ್ಲಿ ನೀಡಿರುವ ಹೇಳಿಕೆಯು ಪ್ರಾಸಿಕ್ಯೂಶನ್ ಸಾಕ್ಷಿ-6 ಶ್ರೀ ಸೈಯದ್ ಇಸಾಕ್ ರವರ ಹೇಳಿಕೆಗೆ ಪುಷ್ಟಿ ನೀಡುತ್ತದೆ. ಸದರಿ ಸಾಕ್ಷಿಯು ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ರವರಿಗೆ ನೀಡಿದ ವರದಿಯನ್ನು ಗುರುತಿಸಿದ್ದು, ಅದು ನಿಶಾನೆ-ಪಿ2 ಆಗಿರುತ್ತದೆ ಹಾಗೂ ಅಮಾನತ್ತುಪಡಿಸಿಕೊಂಡ ವಾಹನವನ್ನು ಗುರುತಿಸುವುದಾಗಿಯೂ ಸದರಿ ವಾಹನವು ಮುದ್ದೇಮಾಲು-1 ಎಂಬುದಾಗಿಯೂ, ಶ್ರೀಗಂಧದ ತುಂಡುಗಳನ್ನು ಮುದ್ದೇಮಾಲು-2 ಎಂಬುದಾಗಿ ಗುರುತಿಸಿರುತ್ತಾರೆ. ಮತ್ತು ಸದರಿ ದಿನ ಹಿಡಿದ ವ್ಯಕ್ತಿಯನ್ನು ಗುರುತಿಸುವುದಾಗಿ ಹೇಳಿರುತ್ತಾರೆ.

ಪಾಟೀ ಸವಾಲಿನಲ್ಲಿ, ಜೀಪನ್ನು ಹಿಡಿದ ಸ್ಥಳದಲ್ಲಿ ಅನಿವಾರ್ಯ ಕಾರಣಗಳಿಂದ ಮಹಜರ್ ಜರುಗಿಸಿಲ್ಲವೆಂದು ಹಾಗೂ ತನ್ನ ಹೆಸರನ್ನು ಆಪಾದನೆ ಪಟ್ಟಿಯಲ್ಲಿ ಸಾಕ್ಷಿಯಾಗಿ ನಮೂದಿಸಲಾಗಿದೆ ಎಂದು ತಿಳಿಸಿರುತ್ತಾರೆ. ಶ್ರೀ ಸೈಯದ್ ಇಸಾಕ್ ರವರ ಆದೇಶದಂತೆ ಶಹವಾಡಿ ಪೊಲೀಸ್ ಠಾಣೆಗೆ ಹೋಗಿದ್ದಾಗಿಯೂ ತಿಳಿಸಿರುತ್ತಾರೆ. ಅಲ್ಲಿ ಜೀಪು ಕಾಣೆಯಾದ ಬಗ್ಗೆ ಕಂಪ್ಲೆಂಟ್ ಕೊಟ್ಟಿರುವುದಾಗಿ ತಿಳಿಸಿದ್ದಾಗಿಯೂ, ಸದರಿ ಜೀಪು ಈ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡ ವಾಹನವಾಗಿರುವುದಾಗಿಯೂ ತಿಳಿಸಿರುತ್ತಾರೆ. ಶ್ರೀಗಂಧದ ಕಳ್ಳತನಕ್ಕೂ ಹಾಗೂ ಮಾಲಿಕರಿಗೂ ಸಂಬಂಧ ಇಲ್ಲ ಎಂಬುದು ತಮಗೆ ಗೊತ್ತಿಲ್ಲವೆಂದು ತಿಳಿಸಿರುತ್ತಾರೆ. ಸದರಿ ಪ್ರಕರಣದಲ್ಲಿ ತಾನು ಸ್ಥಳದಲ್ಲಿ ಜೀಪು, ಶ್ರೀಗಂಧ, ಆಸಾಮಿಗಳನ್ನು ಹಿಡಿದಿಲ್ಲ, ಸುಳ್ಳುವರದಿ ನೀಡಿದ್ದೇನೆ ಎಂಬುದು ಸುಳ್ಳು ಎಂದು ಸಾಕ್ಷಿ ನುಡಿದಿರುತ್ತಾರೆ.

ಪ್ರಾಸಿಕ್ಯೂಶನ್ ಸಾಕ್ಷಿ-1 ಶ್ರೀ ಪಿ.ಸಿ. ಬಸವರಾಜು ಇವರನ್ನು ಸಹಾಯಕ ಅಭಿಯೋಜಕ ನಿರ್ದೇಶಕರು ನಡೆಸಿದ ಮುಖ್ಯ ವಿಚಾರಣೆಯಲ್ಲಿ ದಿನಾಂಕ: 17.04.99ರಂದು ಬೆಳಿಗ್ಗೆ 7.30 ಕ್ಕೆ ಭರಮಸಾಗರ ಠಾಣೆಯ ಸಹಾಯಕ ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಅಬ್ದುಲ್ ಸುಬಾನ್ ರವರು ನನ್ನನ್ನು ಕರೆಸಿದ್ದಾಗಿಯೂ ಅಲ್ಲಿ ಹೋದಾಗ ವಾಹನ ಸಂಖ್ಯೆ: ಎಂಹೆಚ್-10-ಸಿ-4718 ಮಹೇಂದ್ರ ಜೀಪಿನ ಹಿಂಬದಿಯಲ್ಲಿದ್ದ 230 ಕೆಜಿ ಶ್ರೀಗಂಧವನ್ನು ನನ್ನ ಸಮಕ್ಷಮ ತನಿಖೆ ಮಾಡಿ, ಎಣಿಸಿ ತೂಕ ಮಾಡಿ ನೋಡಲಾಗಿ, 230 ಕೆಜಿ ತೂಕ ಶ್ರೀಗಂಧ ಇದ್ದುದಾಗಿಯೂ, ವಾಹನದಲ್ಲಿದ್ದ ಚಿಕ್ಕ ಪುಸ್ತಕವನ್ನು ಪೊಲೀಸರು ವಶಪಡಿಸಿಕೊಂಡಿದ್ದಾಗಿಯೂ ತಿಳಿಸಿರುತ್ತಾರೆ. ಮಹಜರ್‌ಗೆ ಸಹಿ ಮಾಡಿದ್ದಾಗಿಯೂ, ಮಹಜರ್‌ನಲ್ಲಿನ ಸಹಿಯನ್ನು ಅವರದೆಂದು ಗುರುತಿಸಿರುತ್ತಾರೆ. ಅದನ್ನು ನಿಶಾನೆ-ಪಿ1(ಎ) ಎಂದು ಗುರುತಿಸಲಾಯಿತು. ಅಮಾನತ್ತುಪಡಿಸಿಕೊಂಡ ವಾಹನ ಮತ್ತು ಶ್ರೀಗಂಧದ ತುಂಡುಗಳನ್ನು ಗುರುತಿಸುವುದಾಗಿ ತಿಳಿಸಿರುತ್ತಾರೆ.

ಪಾಟೀ ಸವಾಲಿನಲ್ಲಿ ಶ್ರೀ ಹೆಚ್.ಎನ್. ಕಲ್ಲಪ್ಪನವರೊಂದಿಗೆ ದಿನಾಂಕ: 17.04.99ರ ಬೆಳಿಗ್ಗೆ ಭರಮಸಾಗರ ಪೊಲೀಸ್ ಠಾಣೆಗೆ ಹೋಗಿರಲಿಲ್ಲ ಎಂದರೆ ಅದು ಸುಳ್ಳು ಎಂಬುದಾಗಿಯೂ, ಬಸ್‌ಸ್ಟ್ಯಾಂಡಿನಲ್ಲಿದ್ದಾಗ ಅವರನ್ನು ಪೊಲೀಸ್ ಠಾಣೆಗೆ ಕರೆಸಿದ್ದಾಗಿಯೂ ತಿಳಿಸಿರುತ್ತಾರೆ. ಠಾಣೆಯಲ್ಲಿ ಜೀಫಿನ ಹಿಂಬದಿಯಲ್ಲಿದ್ದ ಶ್ರೀಗಂಧವನ್ನು ತೋರಿಸಿಲ್ಲ ಎಂದರೆ, ಎಣಿಕೆ ಮಾಡಿಲ್ಲ ಎಂದರೆ ಅದು ಸುಳ್ಳು, ಮಹಜರ್ ಕಾಲಕ್ಕೆ ನಾನು ಹಾಜರಿರಲಿಲ್ಲ ಎಂದರೆ ಅದು ಸರಿಯಲ್ಲ ಎಂದು ಹೇಳಿಕೆ ನೀಡಿರುತ್ತಾರೆ. ನನ್ನ ಮುಂದೆ ಪೊಲೀಸರು ಜೀಪನ್ನಾಗಲೀ, ಶ್ರೀಗಂಧವನ್ನಾಗಲೀ ಅಮಾನತ್ತುಪಡಿಸಿಕೊಂಡಿಲ್ಲ ಎಂದರೆ ಅದು ಸುಳ್ಳು ಎಂದು ತಿಳಿಸಿರುತ್ತಾರೆ.

ಪ್ರಾಸಿಕ್ಯೂಶನ್ ಸಾಕ್ಷಿ-ಪಿ2 ಶ್ರೀ ಹೆಚ್.ಎನ್. ಕಲ್ಲಪ್ಪ ಇವರು ಮುಖ್ಯ ವಿಚಾರಣೆಯಲ್ಲಿ ಹಾಗೂ ಪಾಟೀ ಸವಾಲಿನ ಸಮಯದಲ್ಲಿ ನೀಡಿರುವ ಸಾಕ್ಷಿಯು ಪ್ರಾಸಿಕ್ಯೂಶನ್ ಸಾಕ್ಷಿ-ಪಿ1ರ ಹೇಳಿಕೆಯಂತೆಯೇ ಇರುತ್ತದೆ.

ಶ್ರೀ ಎಲ್. ಚನ್ನೇಗೌಡ, ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ರವರು ವಾಹನದಲ್ಲಿ ಅಮಾನತ್ತುಪಡಿಸಿಕೊಂಡ ಮಾಲನ್ನು ಪರಿಶೀಲಿಸಿ ಅದು ಶ್ರೀಗಂಧವೇ ಎಂದು ದೃಢೀಕರಣ ಪತ್ರ ನೀಡಿರುತ್ತಾರೆ ಇದು ಮುದ್ದೇಮಾಲು-2 ಎಂದು ಗುರುತಿಸಲಾಗಿದೆ.

ಮೇಲ್ಕಂಡ ಎಲ್ಲಾ ಪ್ರಾಸಿಕ್ಯೂಶನ್ ಸಾಕ್ಷಿಗಳ ಹೇಳಿಕೆಯನ್ನು ಪರಿಶೀಲಿಸಿದಾಗ ಈ ಪ್ರಕರಣದಲ್ಲಿ ಮಹೇಂದ್ರ ಮಾರ್ಶಲ್ ಜೀಪ್ ಸಂಖ್ಯೆ: ಎಂಹೆಚ್-10-ಸಿ-4718ನ್ನು ಶ್ರೀಗಂಧದ ಸಮೇತ ವಶಪಡಿಸಿಕೊಂಡಿರುವುದು ಖಚಿತವಾಗಿದೆ ಹಾಗೂ ಕರ್ನಾಟಕ ಅರಣ್ಯ ಕಾಯ್ದೆ-1963ರ ಕಲಂ-62ರ ಪ್ರಕಾರ ಕ್ರಮಬದ್ಧವಾಗಿ ಅಮಾನತ್ತುಪಡಿಸಲಾಗಿದೆ ಎಂಬುದು ದೃಢಪಟ್ಟಿರುತ್ತದೆ.

**ಅಂಶ-2**

ಕಲಂ-80, 84 ಕರ್ನಾಟಕ ಫಾರೆಸ್ಟ್ ಆ್ಯಕ್ಟ್-1963ರ ಪ್ರಕಾರ ಶ್ರೀಗಂಧವು ಎಲ್ಲಿ ಬೆಳೆದರೂ ರಾಜ್ಯ ಸರ್ಕಾರದ ಸ್ವತ್ತಾಗಿರುತ್ತದೆ. ಸೆಕ್ಷನ್-50 ಕರ್ನಾಟಕ ಫಾರೆಸ್ಟ್ ಆ್ಯಕ್ಟ್-1963 ರೆಡ್‌ವಿತ್ ಕರ್ನಾಟಕ ಫಾರೆಸ್ಟ್ ರೂಲ್ಸ್-1969, ರೂಲ್ 154 ಮತ್ತು 155 ಪ್ರಸ್ತುತಪಡಿಸುವುದೇನೆಂದರೆ, ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ಪ್ರಕರಣ ದಾಖಲಾದ ಬಳಿಕ ಅಂತಹ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಶ್ರೀಗಂಧವನ್ನು ರಾಜ್ಯ ಸರ್ಕಾರದ ಸ್ವತ್ತು ಎಂದೇ ಪರಿಗಣಿಸಲಾಗುತ್ತಿದೆ. ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ಇವರು ಅಮಾನತ್ತುಪಡಿಸಿಕೊಂಡ ಮಾಲನ್ನು ಪರಿಶೀಲಿಸಿ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಮಾಲು ಶ್ರೀಗಂಧವೇ ಎಂದು ದೃಢೀಕರಿಸಿ ಪ್ರಮಾಣ ಪತ್ರ ಸಲ್ಲಿಸಿರುತ್ತಾರೆ. ಆದುದರಿಂದ ಅಮಾನತ್ತು ಪಡಿಸಿಕೊಂಡ ಮಹೇಂದ್ರ ಮಾರ್ಶಲ್ ಜೀಪ್ ಸಂಖ್ಯೆ: ಎಂಹೆಚ್-10-ಸಿ-4718ರಲ್ಲಿ ಇದ್ದ ಮಾಲು ಶ್ರೀಗಂಧವೇ ಆಗಿರುತ್ತದೆ ಎಂಬುದು ದೃಢಪಟ್ಟಿರುತ್ತದೆ.

**ಅಂಶ-3**

ಈ ಪ್ರಕರಣದಲ್ಲಿ ಮಹೇಂದ್ರ ಮಾರ್ಶಲ್ ಜೀಪ್ ಸಂಖ್ಯೆ: ಎಂಹೆಚ್-10-ಸಿ-4718ರ ಮಾಲಿಕರಾದ ಶ್ರೀ ಬಾಬಾ ಸಾಬ್ ಯಶವಂತ ರಾವ್ ಪಾಟೀಲ್ ರವರ ಪವರ್ ಆಫ್ ಅಟಾರ್ನಿ ಹೋಲ್ಡರ್, ಶ್ರೀ ಸತ್ಯಜಿತ್ ಬಾಬಾ ಸಾಬ್ ಪಾಟೀಲ್ ಇವರು ವಿಚಾರಣಾ ಸಮಯದಲ್ಲಿ ವಾಹನದ ಮಾಲಿಕರು ವಾಹನವು ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ತೊಡಗದಂತೆ ಯಾವುದೇ ರೀತಿಯ ಮುಂಜಾಗರೂಕತೆ ಕ್ರಮಗಳನ್ನು ತೆಗೆದುಕೊಂಡಿರುವುದು ಕಂಡುಬಂದಿರುವುದಿಲ್ಲ. ಅರ್ಜಿದಾರರು ಸಾಕ್ಷಿಯಲ್ಲಿ ನುಡಿದಿರುವ ಪ್ರಕಾರ 14.04.1999ರಂದು ಸದರಿ ಜೀಪನ್ನು ಕಾಂಪೌಂಡಿನಲ್ಲಿಟ್ಟು ಗೇಟಿಗೆ ಬೀಗ ಹಾಕಿ ಮಲಗಿಕೊಂಡಿದ್ದು, ಬೆಳಿಗ್ಗೆ ಎದ್ದು ನೋಡಿದಾಗ ಜೀಪು ಕಾಣೆಯಾದ ಬಗ್ಗೆ ಸಾಕ್ಷಿ ನುಡಿದಿರುತ್ತಾರೆ. ಆದರೆ ಶಹವಾಡಿ ಪೊಲೀಸ್ ಠಾಣಾಧಿಕಾರಿಗಳು ತಮ್ಮ ಠಾಣೆ ಗುನ್ನೆ ನಂ.20/99ರಲ್ಲಿ ಪ್ರಕರಣ ದಾಖಲಿಸಿಕೊಂಡಿದ್ದು, ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಮಹಜರ್ ಮಾಡಿರುತ್ತಾರೆ ಮಹಜರ್ ಪ್ರಕಾರ ಮನೆ ಮುಂದೆ ಕಾಂಪೌಂಡ್ ಇದ್ದ ಬಗ್ಗೆಯಾಗಲೀ, ಅದಕ್ಕೆ ಗೇಟ್ ಇದ್ದ ಬಗ್ಗೆಯಾಗಲೀ ಗೇಟ್ ಒಡೆದು ದುಷ್ಕರ್ಮಿಗಳು ಜೀಪನ್ನು ಕಳವು ಮಾಡಿದ ಬಗ್ಗೆ ಯಾವುದೇ ನಿಶಾನೆಯಾಗಲೀ, ಕಾಂಪೌಂಡ್ ಇದ್ದ ಬಗ್ಗೆಯಾಗಲಿ ಮಹಜರ್‌ನಲ್ಲಿ ಕಾಣಿಸಿಲ್ಲ, ಹಾಗಾಗಿ ಸದರಿ ಸಾಕ್ಷಿದಾರರು ಹೇಳಿರುವ ಹೇಳಿಕೆಯು ಸಂಶಯಾಸ್ಪದವಾಗಿರುತ್ತದೆ.

ದಿನಾಂಕ: 15.04.1999ರ ಮುಂಜಾನೆ 3.30 ಕ್ಕೂ ಮೊದಲೇ ವಾಹನವು ಕಳುವಾಗಿರುತ್ತದೆ ಎಂದು ಪಂಚನಾಮೆಯಲ್ಲಿ ನಮೂದಿಸಿರುವುದನ್ನು ಪರಿಗಣಿಸುವುದಾದಲ್ಲಿ ವಾಹನದ ಮಾಲಿಕರು ಕೂಡಲೇ ಈ ಬಗ್ಗೆ ಪೊಲೀಸ್ ಠಾಣೆಯಲ್ಲಿ ಏಕೆ ದೂರನ್ನು ದಾಖಲಿಸಿರುವುದಿಲ್ಲ? ದೂರನ್ನು ದಾಖಲಿಸಲು ಬೆಳಿಗ್ಗೆ 9.25ರ ವರೆಗೆ ಏಕೆ ವಿಳಂಬ ಮಾಡಲಾಯಿತು? ಕೊನೆಯ ಪಕ್ಷ ದೂರವಾಣಿಯ ಮೂಲಕವಾದರೂ ಪೊಲೀಸ್ ಠಾಣೆಗೆ ಏಕೆ ದೂರನ್ನು ನೀಡಿರುವುದಿಲ್ಲ? ಎಂಬ ಪ್ರಶ್ನೆಗಳು ಉದ್ಭವಿಸುತ್ತವೆ. ದಿನಾಂಕ: 15.04.1999ರ ಪಂಚನಾಮೆಯನ್ನು ಅವಲೋಕಿಸಿದಾಗ ಪಂಚರು ಸದರಿ ವಾಹನವು ಕಳುವಾಯಿತೆನ್ನಲಾದ ಸ್ಥಳದ ವಿವರಣೆಯನ್ನು ನೀಡಿರುತ್ತಾರೆಯೇ ವಿನಹ ಸದರಿ ವಾಹನವು ನಿಜವಾಗಿಯೂ ಕಳುವಾಗಿರುವ ಬಗ್ಗೆ ಯಾವುದೇ ಪ್ರಸ್ತಾಪ ಮಾಡಿರುವುದಿಲ್ಲ. ವಾಹನದ ಮಾಲಿಕರು ಪಂಚರ ಸಮ್ಮುಖದಲ್ಲಿ ಸದರಿ ವಾಹನವನ್ನು ದಿನಾಂಕ: 15.04.1999ರ ಮುಂಜಾನೆ 3.30ಕ್ಕಿಂತ ಮೊದಲೇ ಅಪರಿಚಿತ ವ್ಯಕ್ತಿಗಳು ವಾಹನವನ್ನು ಕಳವು ಮಾಡಿಕೊಂಡು ಹೋಗಿರುತ್ತಾರೆ ಎಂಬುದಾಗಿ ತಿಳಿಸಿರುತ್ತಾರೆ. ಆದರೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿನೀಡುವ ಸಮಯದಲ್ಲಿ ದಿನಾಂಕ:15.04.1999ರ ಬೆಳಿಗ್ಗೆ 6.00 ಗಂಟೆಯ ಸಮಯದಲ್ಲಿ ಎದ್ದು ನೋಡಲಾಗಿ ತಮ್ಮ ವಾಹನವು ಕಳುವಾಗಿರುವ ವಿಚಾರವು ತಮ್ಮ ಗಮನಕ್ಕೆ ಬಂದಿರುವುದಾಗಿ ಹೇಳಿಕೆ ನೀಡಿರುತ್ತಾರೆ. ಇವರ ಹೇಳಿಕೆಗಳು ಒಂದಕ್ಕೊಂದು ತಾಳೆ ಹೊಂದುವುದಿಲ್ಲ. ಇದು ಅನುಮಾನಕ್ಕೆ ಆಸ್ಪದ ನೀಡುತ್ತದೆ. ಇದರಿಂದ ವಾಹನವು ನಿಜವಾಗಿಯೂ ಕಳುವಾಗಿತ್ತೇ? ಎಂಬ ಬಗ್ಗೆ ಶಂಕೆ ಉಂಟಾಗುತ್ತದೆ.

ಭಾರತೀಯ ದಂಡ ಸಂಹಿತೆ ಸೆಕ್ಷನ್ 101 ಮತ್ತು 106ರನ್ವಯ ಮತ್ತು ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್-71 (ಬಿ)(2)ರನ್ವಯ ವಾಹನದ ಮಾಲಿಕರಿಗೆ ಅಥವಾ ಅವರ ಏಜೆಂಟರಿಗೆ ವಾಹನವು ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ಭಾಗಿಯಾಗಿಲ್ಲ ಎಂಬುದನ್ನು ಸಾಬೀತುಪಡಿಸುವ ಜವಾಬ್ದಾರಿಯು ಇರುತ್ತದೆ. ಪ್ರಕರಣಕ್ಕೆ ಸಂಬಂಧಿಸಿದ ಸಾಕ್ಷಾಧಾರಗಳನ್ನು ಮತ್ತು ವಾದ ವಿವಾದಗಳನ್ನು ಪರಿಗಣಿಸಿದಾಗ ವಾಹನದ ಮಾಲಿಕರು ವಾಹನವು ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ದುರ್ಬಳಕೆಯಾಗದಂತೆ ಸಮರ್ಪಕವಾದ ಮುಂಜಾಗರೂಕತೆ ಕ್ರಮ ತೆಗೆದು ಕೊಂಡಿಲ್ಲದಿರುವುದು ದೃಢಪಟ್ಟಿರುತ್ತದೆ.

ಆದ್ದರಿಂದ ಅಂಶ-3 ನಕಾರಾತ್ಮಕ ಎಂದು ಸಮರ್ಥಿಸಿದೆ.

ಸರ್ಕಾರದ ಸಹಾಯಕ ಅಭಿಯೋಜಕ ನಿರ್ದೇಶಕರ ಮತ್ತು ಅರ್ಜಿದಾರರ ಪರ ವಕೀಲರ ವಾದ-ವಿವಾದಗಳನ್ನು ಆಲಿಸಿದ ನಂತರ ಈ ಕೆಳಗಿನಂತೆ ಆದೇಶ ನೀಡಿದೆ.

**ಆದೇಶ**

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಜಿ.ಎಸ್. ಕರಿಯಪ್ಪ, ಭಾಅಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್-71(ಎ) ಪ್ರಕಾರ ಪ್ರಸ್ತುತ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ವಾಹನ ಮಹೇಂದ್ರ ಮಾರ್ಷಲ್ ಜೀಪ್ ಸಂಖ್ಯೆ: ಎಂಹೆಚ್-10-ಸಿ-4718 ಇಂಜಿನ್ ಸಂಖ್ಯೆ: DW-121689, ಛಾಸಿಸ್ ಸಂಖ್ಯೆ: CL-55OMD-2LW-DW-121689 ಮತ್ತು ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ 230 ಕೆಜಿ ಶ್ರೀಗಂಧವನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಸದರಿ ವಾಹನ ಮತ್ತು ಶ್ರೀಗಂಧವು ಎಲ್ಲಾ ಋಣಭಾರಗಳಿಂದ ಮುಕ್ತವಾಗಿದೆ ಎಂದು ಘೋಷಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ: 18.10.2004ರಂದು ತೆರೆದ ನ್ಯಾಯಾಲಯದಲ್ಲಿ ನೀಡಲಾಗಿದೆ. ಈ ಆದೇಶವನ್ನು ಹೊರಡಿಸಿದ 30 ದಿನಗಳ ಒಳಗಾಗಿ ಯಾವುದೇ ಅಹವಾಲು ಸ್ವೀಕೃತವಾಗದಿದ್ದಲ್ಲಿ ಈ ಆದೇಶವೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿಗಳು ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

ಪಿ.ಆರ್. 1753

## ಲೋಕೋಪಯೋಗಿ ಇಲಾಖೆ

### ಕಾರ್ಯನಿರ್ವಾಹಕ ಅಭಿಯಂತರು, ಲೋಕೋಪಯೋಗಿ ಇಲಾಖೆ, ಬೆಳಗಾವಿ ವಿಭಾಗ, ಬೆಳಗಾವಿ ಇವರ ನಡವಳಿಕೆಗಳು

**ಆದೇಶ ಸಂಖ್ಯೆ: ಲೋಇ:ಸಿ-1: ಜವಾನ: ಗೈಹಾಜ: 2004-05:3383, ದಿನಾಂಕ: 16ನೇ ಡಿಸೆಂಬರ್, 2004**

**ವಿಷಯ :** ಶ್ರೀ ಶಂಕರ ಎನ್ ವಣ್ಣೂರ, ಜವಾನ, ಲೋ.ಇ. ಉಪ ವಿಭಾಗ ಬೈಲಹೊಂಗಲ ಇವರು ಸರ್ಕಾರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಿ ಇರುವುದರಿಂದ ಸರ್ಕಾರಿ ಸೇವೆಯಿಂದ ತೆಗೆದು ಹಾಕುವ ಕುರಿತು.

**ಉಲ್ಲೇಖ :**
1. ಈ ಕಛೇರಿಯಿಂದ ನೋಂದಾಯಿತ ಅಂಚೆ ಮೂಲಕ ಜಾರಿ ಮಾಡಲಾದ ಕಾರಣ ಕೇಳುವ ನೋಟಿಸ್ ಸಂಖ್ಯೆ: ಲೋಇ:ಸಿ-1: ಜವಾನ: ಗೈಹಾ:01-02:5600, ದಿನಾಂಕ: 27.03.2002 ಹಾಗೂ 544 ದಿನಾಂಕ: 07.05.2002.
2. ಈ ಕಛೇರಿ ಆದೇಶ ಸಂಖ್ಯೆ: ಲೋಇ:ಸಿ-1: ಜವಾನ ಗೈಹಾ:02-03:1739 ದಿನಾಂಕ: 25.07.2002 (ವಿಚಾರಣೆ ಅಧಿಕಾರ ಹಾಗೂ ಮಂಡನ ಅಧಿಕಾರಿ ನೇಮಕ ಮಾಡಿದ ಆದೇಶ)
3. ವಿಚಾರಣಾಧಿಕಾರಿಗಳ ವರದಿ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು, ಲೋಇ. ಉಪವಿಭಾಗ ಬೆಳಗಾವಿ ಇವರ ಪತ್ರ ನಂ.ಸಕಾಅ:ಲೋಇ: ಬೆವಿ: 02-03: 962 ದಿನಾಂಕ: 24.09.2002.
4. ಈ ಕಛೇರಿ ಪತ್ರ ನಂ. ಲೋಇ:ಸಿ-1: ಜವಾನ: ಗೈಹಾ: ಶಿಕ್ರಜ: 02-03:5453 ದಿನಾಂಕ: 19.03.2003ರ ಕೆಳಗೆ ಶ್ರೀ ಶಂಕರ ಎನ್. ವಣ್ಣೂರ ಜವಾನ ಇವರಿಗೆ ವಿಚಾರಣೆ ವರದಿ ನೋಂದಾಯಿತ ಅಂಚೆ ಮೂಲಕ ಜಾರಿ ಮಾಡಿದ ಕುರಿತು.
5. ಸರ್ಕಾರಿ ಸುತ್ತೋಲೆ ಕ್ರ.ನಂ.ಸಿಆಸುಇ-18: ಸೇಇವಿ:2001 ದಿನಾಂಕ: 14.09.2001.
6. ಈ ಕಛೇರಿಯ ಅಂತಿಮ ತಿಳುವಳಿಕೆ ಪತ್ರ ನಂ. ಲೋಇ:ಸಿ-1:ಜವಾನ:ಗೈಹಾ: ಶಿಕ್ರಜ:2003-04:846: ದಿನಾಂಕ: 10.06.2003ರ ಕೆಳಗೆ ಶ್ರೀ ಶಂಕರ್ ಎನ್. ವಣ್ಣೂರ ಜವಾನ ಇವರಿಗೆ ಕೊಟ್ಟ ಪ್ರಕಾರ.

**ಪ್ರಸ್ತಾವನೆ:**

ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಲೋಇ. ಉಪವಿಭಾಗ ಬೈಲಹೊಂಗಲ ಇವರ ಕಛೇರಿಯಲ್ಲಿ ದಿನಾಂಕ: 14.08.1998ರಿಂದ ಸೇವೆ ಸಲ್ಲಿಸುತ್ತಿರುವ ಶ್ರೀ ಶಂಕರ ಎನ್. ವಣ್ಣೂರ, ಜವಾನ ಇವರು ದಿನಾಂಕ: 15.08.1998ರಿಂದ 31.10.1998ರ ವರೆಗೆ, 1.12.1998 ರಿಂದ 29.07.1999ರ ವರೆಗೆ ಮತ್ತು 07.09.1999 ರಿಂದ 31.12.2000ರ ವರೆಗೆ ಅನಧಿಕೃತವಾಗಿ ಕಛೇರಿ ಕೆಲಸಕ್ಕೆ ಗೈರು ಹಾಜರಿ ಇದ್ದ ಬಗ್ಗೆ ಇಲಾಖಾ ವಿಚಾರಣೆ ಮಾಡಿ ಕರ್ನಾಟಕ ನಾಗರೀಕ ಸೇವಾ ನಿಯಮಗಳ (ವರ್ಗೀಕರಣ ಮತ್ತು ನಿಯಮಗಳ ಅಪೀಲು) ನಿಯಮ-8(3)ರ ಪ್ರಕಾರ

ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮದ ರಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿತ್ತು ಹಾಗೂ ಅನಧಿಕೃತ ಗೈರು ಹಾಜರಿ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಿ ಆದೇಶಿಸಲಾಗಿತ್ತು. ಆದಾಗ್ಯೂ ಸಹಿತ ಸದರಿ ನೌಕರರು ತಮ್ಮ ಕಾರ್ಯವೈಖರಿಯನ್ನು ಸುಧಾರಿಸಿಕೊಳ್ಳದೆ ಪುನಃ ದಿನಾಂಕ: 16.01.2001 ರಿಂದ 21.01.2001 ಹಾಗೂ 26.01.2001 ರಿಂದ 26.03.2002ರ ವರೆಗೆ ಸರ್ಕಾರದ ಕೆಲಸಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವುದರಿಂದ ಅವರ ವಿರುದ್ಧ ದೋಷಾರೋಪಣಾ ಪಟ್ಟಿ ಅನುಬಂಧ-1 ರಿಂದ 4ರ ವರೆಗೆ ತಯಾರಿಸಿ ಸದರಿ ನೌಕರರಿಗೆ ಉಲ್ಲೇಖಿತ-(1) ರಲ್ಲಿ ನಮೂದಿಸಿದ ಈ ಕಛೇರಿಯ ಪತ್ರದಲ್ಲಿ ಕಾರಣ ಕೇಳುವ ನೋಟೀಸನ್ನು ನೋಂದಾಯಿತ ಅಂಚೆ ಮೂಲಕ ಜಾರಿ ಮಾಡಲಾಗಿತ್ತು. ಸದರಿ ಕಾರಣ ಕೇಳುವ ನೋಟಿಸನ್ನು ಸದರಿ ನೌಕರರು ಸ್ವೀಕರಿಸಿದ್ದು ನೋಟಿಸಿಗೆ ಯಾವುದೇ ಪ್ರತಿ ಉತ್ತರ ಸಲ್ಲಿಸಿರುವುದಿಲ್ಲ ಹಾಗೂ ಈ ಕಛೇರಿಯಿಂದ ನೀಡಲ್ಪಟ್ಟ ಕೊನೆಯ ನೋಟೀಸ್ ಸಂಖ್ಯೆ: 544 ದಿನಾಂಕ: 07.05.2002ರ ಕೆಳಗೆ ಆಪಾದನಾ ಪಟ್ಟಿಗೆ ಹೇಳಿಕೆಯನ್ನು ಸಲ್ಲಿಸಲು ಮತ್ತೊಮ್ಮೆ ಸೂಚಿಸಲಾಗಿತ್ತು. ಸದರಿ ನೋಟಿಸನ್ನು ಸ್ವೀಕರಿಸಿದ್ದು ಆದರೆ ಯಾವುದೇ ಪ್ರತ್ಯುತ್ತರ ನೀಡಿರುವುದಿಲ್ಲ. ಆದ್ದರಿಂದ ಅವರ ವಿರುದ್ಧ ಹೂಡಲಾದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ತೀರ್ಮಾನಿಸಿ ಈ ಕಛೇರಿಯ ಆದೇಶ ಸಂಖ್ಯೆ: 1739 ದಿನಾಂಕ: 25.07.2002ರಲ್ಲಿ (ಉಲ್ಲೇಖಿತ-(2)ರಲ್ಲಿ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಲೋ.ಇ. ಉಪ-ವಿಭಾಗ ಬೆಳಗಾಂವ ಇವರನ್ನು ವಿಚಾರಣಾ ಅಧಿಕಾರಿಯಾಗಿ ಹಾಗೂ ಸದರಿ ಉಪ ವಿಭಾಗದ ಪ್ರ.ದ.ಸ. ಇವರನ್ನು ಅಭಿಯುಕ್ತ ಅಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಉಲ್ಲೇಖಿತ-(3)ರಲ್ಲಿ ನಮೂದಿಸಿರುವ ಪತ್ರದನ್ವಯ ವಿಚಾರಣೆ ಅಧಿಕಾರಿಗಳು ಆಪಾದಿತ ಸರ್ಕಾರಿ ನೌಕರರು ಎಸಗಿದ ದುರ್ನಡತೆಯ ಬಗ್ಗೆ ವಿಚಾರಣೆ ವರದಿಯನ್ನು ಸಲ್ಲಿಸಿದ್ದಾರೆ. ಉಲ್ಲೇಖಿತ-(4)ರಲ್ಲಿ ನಮೂದಿಸಿದ ಪತ್ರದನ್ವಯ ವಿಚಾರಣೆ ವರದಿಯ ಪ್ರತಿಯನ್ನು ಆಪಾದಿತ ಸರ್ಕಾರಿ ನೌಕರರಿಗೆ ಜಾರಿ ಮಾಡಿ ಸದರಿ ವಿಚಾರಣೆ ವರದಿ ವಿರುದ್ಧ ತಮ್ಮ ಹೇಳಿಕೆ ಇದ್ದಲ್ಲಿ ಸಲ್ಲಿಸಲು ನೋಂದಾಯಿತ ಅಂಚೆ ಮೂಲಕ ಸೂಚಿಸಲಾಗಿತ್ತು. ಆದರೆ ಈ ಬಗ್ಗೆ ಆಪಾದಿತ ಸರ್ಕಾರಿ ನೌಕರರು ಯಾವುದೇ ಪ್ರತ್ಯುತ್ತರ ಸಲ್ಲಿಸಿರುವುದಿಲ್ಲ.

ಆಪಾದಿತ ಸರ್ಕಾರಿ ನೌಕರರು ಎಸಗಿದ ಆರೋಪಗಳ ಬಗ್ಗೆ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವರದಿಯನ್ನು ಪರಿಶೀಲಿಸಲಾಗಿ ಅವರ ವಿರುದ್ಧ ಮಾಡಲಾದ ಆರೋಪಗಳು ರುಜುವಾತು ಪಟ್ಟಿರುತ್ತವೆ ಎಂದು ಖಚಿತವಾಗಿರುತ್ತವೆ. ಆಪಾದಿತ ಸರ್ಕಾರಿ ನೌಕರನು ದಿನಾಂಕ: 16.01.2001 ರಿಂದ 21.01.2001ರ ವರೆಗೆ ಹಾಗೂ 26.01.2001 ರಿಂದ 08.09.2002ರ ವರೆಗೆ ಹಾಗೂ ದಿನಾಂಕ: 24.09.2002ರಿಂದ 30.09.2002ರ ವರೆಗೆ ಮತ್ತು ದಿನಾಂಕ: 29.10.2002 ರಿಂದ ಇಂದಿನವರೆಗೆ ಸರ್ಕಾರಿ ಕೆಲಸಕ್ಕೆ ಅನಧಿಕೃತವಾಗಿ ಗೈರು ಹಾಜರಿದ್ದು ಅಂದರೆ ನಾಲ್ಕು ತಿಂಗಳು ಮೀರಿದ ಅನಧಿಕೃತ ಗೈರುಹಾಜರಿ ಆಗಿ ಉಲ್ಲೇಖಿತ (5)ರ ಸರ್ಕಾರದ ನಿರ್ದೇಶನದನ್ವಯ ಸದರಿ ಜವಾನರು ಎಸಗಿದ ಅಪರಾಧವು ಸಾಬೀತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1957 ನಿಯಮ-108 ಹಾಗೂ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1956 ನಿಯಮ-3(2)ನ್ನು ಉಲ್ಲಂಘನೆ ಮಾಡಿರುವುದರಿಂದ ಈ ಕೆಳಕಂಡ ದಂಡನೆಯನ್ನು ವಿಧಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ನಾನು ವಿನಾಯಕ ಜಿ. ಸೂಗೂರ, ಕಾರ್ಯನಿರ್ವಾಹಕ ಅಭಿಯಂತರರು, ಲೋ.ಇ. ಬೆಳಗಾವಿ ವಿಭಾಗ, ಬೆಳಗಾವಿ ಶಿಸ್ತು ಪ್ರಾಧಿಕಾರಿ ನನ್ನಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ನಾಗರೀಕ ಸೇವೆಗಳ (ವರ್ಗೀಕರಣ ಮತ್ತು ನಿಯಂತ್ರಣ ಅಪೀಲು) 1957 ನಿಯಮ 8ನೇ ನಿಯಮ ಮತ್ತು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1957 ನಿಯಮ 108 ರನ್ವಯ ಶ್ರೀ ಶಂಕರ ಎನ್. ವಣ್ಣೂರ, ಜವಾನ ಇವರನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ಸೇವೆಯಿಂದ ತೆಗೆದು ಹಾಕಲಾಗಿದೆ.

ವಿನಾಯಕ ಜಿ. ಸೂಗೂರ
ಕಾರ್ಯಕಾರಿ ಅಭಿಯಂತರರವರು,
ಲೋಕೋಪಯೋಗಿ ಇಲಾಖೆ, ಬೆಳಗಾವಿ ವಿಭಾಗ, ಬೆಳಗಾವಿ.

ಪಿ.ಆರ್. 1754

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು-52

**ಸಂಖ್ಯೆ: ಆರ್‌ಸಿಎಸ್:ಎಲ್‌ಕ್ಯೂಡಿ:13:2004-05, ದಿನಾಂಕ: 9ನೇ ಡಿಸೆಂಬರ್, 2004**

**ವಿಷಯ :** ಸ್ವದೇಶಿ ಉದ್ಯೋಗ ಸಹಕಾರ ಸಂಘ ನಿ., ನವಲಗುಂದ ಇದರ ವ್ಯವಹಾರಗಳನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರಡಿ ಸಮಾಪನೆ ಕುರಿತು.

**ಉಲ್ಲೇಖ :** 1. ಸಹಕಾರ ಸಂಘಗಳ ಉಪ ನಿಬಂಧಕರು, ಧಾರವಾಡ ಇವರ ಪತ್ರ ಸಂಖ್ಯೆ: ಡಿಆರ್‌ಜಡ್: ಎಲ್‌ಕ್ಯೂಡಿ:ಸಿಆರ್:5:2004-05 ದಿನಾಂಕ: 14.05.2004.

2. ಈ ಕಛೇರಿಯ ಇದೇ ಕ್ರಮಾಂಕದ ನೋಟೀಸು ದಿನಾಂಕ: 27.08.2004.

**ಪೀಠಿಕೆ:**

ಸ್ವದೇಶಿ ಉದ್ಯೋಗ ಸಹಕಾರ ಸಂಘ ನಿ., ನವಲಗುಂದ ಈ ಸಂಘವು ಸಂಖ್ಯೆ: 22440/22-9-1997 ರಂತೆ ನೋಂದಣಿಯಾಗಿದ್ದು ಇದರ ಕಾರ್ಯಕ್ಷೇತ್ರವು ಜಿಲ್ಲಾ ಮಟ್ಟದ್ದಾಗಿರುತ್ತದೆ.

ಉಲ್ಲೇಖ (1)ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ಧಾರವಾಡ ಇವರು ಈ ಕೆಳಕಂಡ ಕಾರಣಗಳಿಂದ ಸಂಘವನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

1. ಸಂಘದಲ್ಲಿ ಕಳೆದ 5 ವರ್ಷಗಳಿಂದ ಯಾವುದೇ ವ್ಯವಹಾರಗಳು ಜರುಗಿರುವುದಿಲ್ಲ.
2. ಸಂಘದ ಆಡಳಿತ ಸಭೆಗಳು ಮತ್ತು ವಾರ್ಷಿಕ ಮಹಾಸಭೆಗಳು ಜರುಗಿರುವುದಿಲ್ಲ.
3. ಲೆಕ್ಕ ಪತ್ರಗಳು ಸಂಘದ ನೋಂದಣೆಯ ದಿನದಿಂದ ಇಲ್ಲಿಯವರೆಗೆ ಲೆಕ್ಕ ಪರಿಶೋಧನೆಗೆ ಒಳಪಟ್ಟಿರುವುದಿಲ್ಲ.
4. ಸಹಕಾರ ಅಭಿವೃದ್ಧಿ ಅಧಿಕಾರಿಗಳು, ನವಲಗುಂದ ಇವರು ತಯಾರಿಸಿದ ಆಡಾವೆ ಪತ್ರಿಕೆ ಪ್ರಕಾರ ಸದಸ್ಯರ ಸಂದಾಯವಾದ ಷೇರು ರೂ.20,000-00 ಗಳಾದರೆ ಕೂಡಿಬಿದ್ದ ಹಾನಿ ರೂ.9,350-00 ಗಳೆಂದು ತಿಳಿದುಬರುತ್ತದೆ.

ಸಂಘವನ್ನು ಪುನಃಶ್ಚೇತನಗೊಳಿಸಲು ಯಾವುದೇ ಸಾಧ್ಯತೆಗಳು ಇಲ್ಲದೆ ಇರುವುದರಿಂದ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಸಮಾಪನೆಗೊಳಿಸಲು ಸಹಕಾರ ಸಂಘಗಳ ಉಪ ನಿಬಂಧಕರು, ಧಾರವಾಡ ಇವರು ತಿಳಿಸಿರುವುದರಿಂದ ಉಲ್ಲೇಖ (2)ರಲ್ಲಿ ಸದರಿ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ನೋಟೀಸು ಜಾರಿ ಮಾಡಿ ಸಂಘವನ್ನು ಸಮಾಪನೆಗೊಳಿಸಲು ತಮ್ಮ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಈ ಕಛೇರಿಗೆ ವರದಿ ಮಾಡಲು ತಿಳಿಸಲಾಗಿತ್ತಾದರೂ ಸಂಘದಿಂದ ಯಾವುದೇ ಪ್ರತಿಕ್ರಿಯೆ ಬಾರದಿದ್ದರಿಂದ ಆಕ್ಷೇಪಣೆ

ಇಲ್ಲವೆಂದು ಪರಿಗಣಿಸಿ ಸದರಿ ಸಂಘವನ್ನು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) (ಬಿ) ರನ್ವಯ ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಪರಿಭಾವಿಸಿ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

ಪೀಠಿಕೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು ಆದ ನಾನು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ) ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಸ್ವದೇಶಿ ಉದ್ಯೋಗ ಸಹಕಾರ ಸಂಘ ನಿ., ನವಲಗುಂದ ಇದನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ. ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ನವಲಗುಂದ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಿಸಿರುತ್ತೇನೆ.

ಸಮಾಪನಾಧಿಕಾರಿಯು ಸಂಘದ ಪ್ರಭಾರವನ್ನು ಆದೇಶ ಹೊರಡಿಸಿದ ದಿನಾಂಕದ ಒಂದು ವಾರದೊಳಗೆ ವಹಿಸಿಕೊಂಡು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಛೇರಿಗೆ ಸಲ್ಲಿಸತಕ್ಕದ್ದು. ಹಾಗೂ ಸಹಕಾರ ಸಂಘಗಳ ಕಾಯ್ದೆ 1959 ಕಲಂ 74 ಮತ್ತು ನಿಯಮ 33ರಂತೆ ಸಮಾಪನಾಧಿಕಾರಿಯ ಕರ್ತವ್ಯ ನಿರ್ವಹಿಸುವುದಲ್ಲದೆ ಸಂಘದ ಇತ್ತೀಚಿನ ಲೆಕ್ಕ ತಪಾಸಣಾ ವರದಿಯಾಧರಿಸಿ ಆದ್ಯತಾ ಪಟ್ಟಿಯನ್ನು ತಯಾರಿಸಿ ಈ ಕಛೇರಿಯ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿಗಳನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಈ ಆದೇಶವನ್ನು ಸ್ವಸಹಿ ಮತ್ತು ಮುದ್ರೆಯೊಂದಿಗೆ ಈ ದಿನ ದಿನಾಂಕ: 09.12.2004ರಂದು ಹೊರಡಿಸಲಾಗಿದೆ.

**ಬಿ. ನಾಗರಾಜ**

ಸಹಕಾರ ಸಂಘಗಳ ಅಪರ ನಿಬಂಧಕರು,

ಪಿ.ಆರ್. 1755 (ಕೈಗಾರಿಕೆ ಮತ್ತು ಇತರೆ)

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ಸಂಖ್ಯೆ: ಎ3(ಬಿ1): ಅಮೊ: ಶ್ರೀಗಂಧ: ಮಾರುತಿ: 8713/ 2002-03, ದಿನಾಂಕ: 20ನೇ ನವೆಂಬರ್, 2004**

**ವಿಷಯ :** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಮಾರುತಿ ಕಾರು ನೊಂದಣಿ ಸಂಖ್ಯೆ: ಕೆಎ-03-ಎಂ-8713 ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ :**
1. ವಲಯ ಅರಣ್ಯಾಧಿಕಾರಿ, ಹಣಗೆರೆ ವನ್ಯಜೀವಿ ವಲಯ, ಸಿರಿಗೆರೆ ಇವರ ಪತ್ರದ ಸಂಖ್ಯೆ: ಹವಸಿ: 179/2002-03 ದಿನಾಂಕ: 05.10.2002.
2. ಈ ಕಛೇರಿಯ ನ್ಯಾಯಾಲಯದಿಂದ ಹೊರಡಿಸಲಾದ ದಿನಾಂಕ: 28.11.2002ರ ಪ್ರಕಟಣೆ ಶಿವಮೊಗ್ಗ ಟೈಮ್ಸ್ ಸ್ಥಳೀಯ ಕನ್ನಡ ದಿನ ಪತ್ರಿಕೆಯಲ್ಲಿ ದಿನಾಂಕ: 16.12.2002ರಲ್ಲಿ ಪ್ರಕಟಿಸಲಾಗಿರುತ್ತದೆ.

**ಪ್ರಕರಣದ ಹಿನ್ನೆಲೆ:**

ವಲಯ ಅರಣ್ಯಾಧಿಕಾರಿ, ಹಣಗೆರೆ ವನ್ಯಜೀವಿ ವಲಯ, ಸಿರಿಗೆರೆ ಮತ್ತು ಸಿಬ್ಬಂದಿಗಳು ದಿನಾಂಕ: 05.10.2002ರಂದು ಇಲಾಖಾ ವಾಹನದಲ್ಲಿ ಕೂಡಿ ಮನ್ನಾ ಜಂಗಲಿಯ ಗಸ್ತು ಕಾರ್ಯಕ್ಕಾಗಿ ಹೋಗುವ ಸಲುವಾಗಿ ಸಿರಿಗೆರೆ ಅರಣ್ಯ ತನಿಖಾ ಠಾಣೆಯ ಬಳಿಗೆ ಬಂದು, ಹಣಗೆರೆ ಕಡೆಯಿಂದ ಬರುವ ವಾಹನಗಳನ್ನು ತಪಾಸಿಸುತ್ತಿದ್ದಾಗ, ಬೆಳಿಗ್ಗೆ ಸುಮಾರು 11.00 ಗಂಟೆಯ ಸಮಯದಲ್ಲಿ, ಬಿಳಿ ಬಣ್ಣದ ಮಾರುತಿ ಕಾರೊಂದು ತನಿಖಾ ಠಾಣೆ ಕಡೆಗೆ ಬರುತ್ತಿರುವಾಗ ಸುಮಾರು 100 ಮೀಟರ್ ದೂರದಲ್ಲಿ ತಿರುಗಿಸಿಕೊಂಡು ವಾಪಸ್ ಹೋಗುತ್ತಿರುವುದನ್ನು ಕಂಡು, ಅನುಮಾನಾಸ್ಪದವಾಗಿ ಸದರಿ ಕಾರನ್ನು ಇಲಾಖಾ ವಾಹನದೊಂದಿಗೆ ಹಿಂಬಾಲಿಸಿದಾಗ, ಕಾರಿನಲ್ಲಿದ್ದ ಆಸಾಮಿಗಳು ಇಲಾಖಾ ಜೀಪು ಹಿಂಬಾಲಿಸುತ್ತಿರುವುದನ್ನು ಗಮನಿಸಿ ಕಾರನ್ನು ಬಿಟ್ಟು ಪರಾರಿಯಾಗಿರುತ್ತಾರೆ. ಸದರಿ ವಾಹನವನ್ನು ಕೂಲಂಕುಷವಾಗಿ ಪರಿಶೀಲನೆ ಮಾಡಿ ನೋಡಿದಾಗ, ಅದರಲ್ಲಿ ಸುಮಾರು 76.00 ಕೆ.ಜಿ. ಶ್ರೀಗಂಧದ ತುಂಡುಗಳು ಮತ್ತು ಚಕ್ಕೆಗಳು ಇರುವುದನ್ನು ಕಂಡು, ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣಿಕೆ ಮಾಡುತ್ತಿದ್ದ ವಾಹನ (ನೊಂದಣಿ ಸಂಖ್ಯೆ: ಕೆಎ-03-ಎಂ-8713) ಮತ್ತು ಶ್ರೀಗಂಧವನ್ನು ಸರ್ಕಾರಿ ಪರ ಅಮಾನತ್ತುಪಡಿಸಿ, ಅರಣ್ಯ ಮೊಕದ್ದಮೆ ದಾಖಲು ಮಾಡಿರುತ್ತಾರೆ. ತದನಂತರ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ, 86, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 144ರ ಪ್ರಕಾರ ತಕ್ಷೀರು ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ, ಶ್ರೀಗಂಧದ ತುಂಡು, ಚಕ್ಕೆ ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ವಾರಸುದಾರರು ಯಾರಾದರೂ ಇದ್ದರೆ, ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಶ್ರೀಗಂಧದ ತುಂಡುಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬ ಬಗ್ಗೆ, ತಿಳುವಳಿಕೆ ಪತ್ರವನ್ನು ಕನ್ನಡ ಸ್ಥಳೀಯ ದಿನಪತ್ರಿಕೆಯಾದ ಶಿವಮೊಗ್ಗ ಟೈಮ್ಸ್ ನಲ್ಲಿ ದಿನಾಂಕ: 16.12.2002ರಲ್ಲಿ ಪ್ರಕಟಿಸಲಾಗಿರುತ್ತದೆ.

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಇಂದಿರಾನಗರ, ಬೆಂಗಳೂರು, ಇವರು ನೀಡಿದ ಬಿ ಎಕ್ಸ್‌ಟ್ರ್ಯಾಕ್ಟ್ ಪ್ರಕಾರ ವಾಹನದ ಮೂಲ ಖರೀದಿದಾರರಿಗೆ, ವಾಹನದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವ ಸಂಬಂಧ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಸೂಕ್ತ ಸಮಜಾಯಿಷಿ ನೀಡಲು ನೊಂದಾಯಿತ ಅಂಚೆ ಮೂಲಕ ದಿನಾಂಕ: 08.09.2003, 08.12.2003, ಮತ್ತು 20.02.2004 ರಂದು ನೋಟೀಸ್ ನೀಡಲಾಗಿರುತ್ತದೆ. ಈ ನೋಟೀಸುಗಳು ಸ್ವೀಕೃತಗೊಳ್ಳದೇ ವಾಪಸ್ ಬಂದಿರುತ್ತವೆ. ಸಾಕಷ್ಟು ಕಾಲಾವಕಾಶ ಕೊಟ್ಟರೂ, ಸದರಿ ವಾಹನದ ಬಗ್ಗೆ ತಮ್ಮ ಮಾಲಿಕತ್ವವನ್ನು ದೃಢೀಕರಿಸಿ ವಾಹನವನ್ನು ವಶಕ್ಕೆ ಇದುವರೆಗೆ ಕೋರದೇ ಇರುವುದನ್ನು ನೋಡಿದರೆ ಈ ವಾಹನ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿ, ಉಪಯೋಗಿಸಲ್ಪಟ್ಟಂತಹ ವಾಹನವೆಂದು ದೃಢವಾಗುತ್ತದೆ. ವಾಹನದ ಮಾಲಿಕರು ಮಾಲೀಕತ್ವದ ಬಗ್ಗೆ, ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲವೆಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ, ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಮಾರುತಿ ಕಾರು ನೊಂದಣಿ ಸಂಖ್ಯೆ: ಕೆಎ-03-ಎಂ-8713 (ಎಂಜಿನ್ ಸಂಖ್ಯೆ: ಎಫ್8ಬಿಐಎನ್983334, ಛಾಸಿಸ್ ಸಂಖ್ಯೆ: ಎಸ್‌ಬಿ-308-ಐಎನ್-654233) ಮತ್ತು ಶ್ರೀಗಂಧದ ತುಂಡುಗಳು ಮತ್ತು ಚಕ್ಕೆ 76.00 ಕೆ.ಜಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧದ ತುಂಡುಗಳು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 20.11.2004ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎ.ಎನ್. ಕರ್ಕೀಕರ್**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್. 1756

## ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ

**ಸಂಖ್ಯೆ: ಎ3(ಬಿ1): ಅಮೊ: ಶ್ರೀಗಂಧ: ಬಜಾಜ್‌ಸ್ಕೂಟರ್: 5168/ 2003-04, ದಿನಾಂಕ: 20ನೇ ನವೆಂಬರ್, 2004**

**ವಿಷಯ :** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಬಜಾಜ್ ಚೇತಕ್ ಸ್ಕೂಟರ್ ನೊಂದಣಿ ಸಂಖ್ಯೆ: ಕೆಎ-14-ಹೆಚ್-5168 ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ :**
1. ವಲಯ ಅರಣ್ಯಾಧಿಕಾರಿ, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಇವರ ಪತ್ರದ ಸಂಖ್ಯೆ: ಸಬೈ: ಅಮೊ:111/2003-04 ದಿನಾಂಕ: 14.07.2003.
2. ಈ ಕಛೇರಿಯ ನ್ಯಾಯಾಲಯದಿಂದ ಹೊರಡಿಸಲಾದ ದಿನಾಂಕ: 05.08.2004ರ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 02.09.2004 ರಂದು ಮತ್ತು ಸಹ್ಯಾದ್ರಿ ಕನ್ನಡ ಸ್ಥಳೀಯ ದಿನ ಪತ್ರಿಕೆಯಲ್ಲಿ ದಿನಾಂಕ: 19.08.2004ರಂದು ಪ್ರಕಟಿಸಲಾಗಿರುತ್ತದೆ.

**ಪ್ರಕರಣದ ಹಿನ್ನೆಲೆ:**

ದಿನಾಂಕ: 13.07.2003ರಂದು ಗಾಜನೂರು ತನಿಖಾ ಠಾಣೆಗೆ ಬೆಳಿಗ್ಗೆ ಸುಮಾರು 11.30ರ ಸಮಯದಲ್ಲಿ, ತೀರ್ಥಹಳ್ಳಿ ಕಡೆಯಿಂದ ಶಿವಮೊಗ್ಗ ಕಡೆಗೆ ಬಂದ ಕೆಎ-14-ಹೆಚ್-5168ರ ನೊಂದಾವಣೆಯ ಬಜಾಜ್ ಚೇತಕ್ ಸ್ಕೂಟರ್‌ನ್ನು ತನಿಖಾ ಠಾಣೆಯ ಕರ್ತವ್ಯ ನಿರತ ವನಪಾಲಕರು ತಪಾಸಿಸಿದಾಗ, 11.00 ಕೆ.ಜಿ. ಶ್ರೀಗಂಧದ ತುಂಡುಗಳು ಮತ್ತು ಚಕ್ಕೆ ಇರುವುದನ್ನು ಕಂಡು, ಅಧಿಕೃತ ರಹದಾರಿ ಇಲ್ಲದೇ ಇರುವುದರಿಂದ, ಸ್ಕೂಟರ್ ಸವಾರನನ್ನು ದಸ್ತಗಿರಿ ಮಾಡಿ, ವಾಹನ, ಶ್ರೀಗಂಧದ ತುಂಡು ಮತ್ತು ಚಕ್ಕೆಯನ್ನು ಸರ್ಕಾರಿ ಪರ ಅಮಾನತ್ತುಪಡಿಸಿ, ಅರಣ್ಯ ಮೊಕದ್ದಮೆ ದಾಖಲು ಮಾಡಿರುತ್ತಾರೆ. ಮತ್ತು ದಸ್ತಗಿರಿ ಮಾಡಿದ ಆಸಾಮಿಯನ್ನು ನ್ಯಾಯಾಂಗ ವಶಕ್ಕೆ ನೀಡಿರುತ್ತಾರೆ. ತದನಂತರ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 86, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 144ರ ಪ್ರಕಾರ ತಕ್ಷೀರು ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ, ಶ್ರೀಗಂಧದ ತುಂಡು ಮತ್ತು ಚಕ್ಕೆ ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ವಾರಸುದಾರರು ಯಾರಾದರು ಇದ್ದರೆ, ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಶ್ರೀಗಂಧದ ತುಂಡುಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬ ಬಗ್ಗೆ, ತಿಳುವಳಿಕೆ ಪತ್ರವನ್ನು ದಿನಾಂಕ: 02.09.2004ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಮತ್ತು ಸಹ್ಯಾದ್ರಿ ಕನ್ನಡ ಸ್ಥಳೀಯ ದಿನಪತ್ರಿಕೆಯಲ್ಲಿ ದಿನಾಂಕ: 19.08.2004ರಂದು ಪ್ರಕಟಿಸಲಾಗಿರುತ್ತದೆ.

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರು ನೀಡಿದ ಬಿ ಎಕ್ಸ್‌ಟ್ರ್ಯಾಕ್ಟ್ ಪ್ರಕಾರ ವಾಹನದ ಮೂಲ ಖರೀದಿದಾರರಿಗೆ, ವಾಹನದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವ ಸಂಬಂಧ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಸೂಕ್ತ ಸಮಜಾಯಿಷಿ ನೀಡಲು ನೋಟೀಸ್ ನೀಡಲಾಗಿರುತ್ತದೆ. ಈ ನೋಟೀಸ್‌ಗೆ ಮೂಲ ಖರೀದಿದಾರರು ಸದರಿ ವಾಹನವನ್ನು ಮಾರಾಟ ಮಾಡಿರುವುದಾಗಿ ತಿಳಿಸುತ್ತಾ, ವಾಹನ ಪಡೆದ ವ್ಯಕ್ತಿಯ ವಿಳಾಸವನ್ನು ನೀಡಿರುತ್ತಾರೆ. ವಿಳಾಸ ನೀಡಿದ ವ್ಯಕ್ತಿಗೆ ನೋಂದಾಯಿತ ಅಂಚೆ ಮೂಲಕ ದಿನಾಂಕ: 20.02.2004, 19.05.2004 ಮತ್ತು 20.08.2004ರಂದು ನೋಟೀಸ್‌ಗಳನ್ನು ನೀಡಲಾಗಿದ್ದು, ನೋಟೀಸ್‌ಗಳು ಸ್ವೀಕೃತಗೊಂಡಿರುತ್ತವೆ. ವಿಚಾರ ತಿಳಿದಿದ್ದಾಗ್ಯೂ ಸದರಿಯವರು ಜವಾಬಾಗಲೀ ಅಥವಾ ಖುದ್ದು ಈ ನ್ಯಾಯಾಲಯಕ್ಕೆ ಬಂದು ಹೇಳಿಕೆಯನ್ನಾಗಲೀ ನೀಡಿರುವುದಿಲ್ಲ. ಸಾಕಷ್ಟು ಕಾಲಾವಕಾಶ ಕೊಟ್ಟರೂ, ಸದರಿ ವಾಹನದ ಬಗ್ಗೆ ತಮ್ಮ ಮಾಲೀಕತ್ವವನ್ನು ದೃಢೀಕರಿಸಿ ವಾಹನವನ್ನು ವಶಕ್ಕೆ ಇದುವರೆಗೆ ಕೋರದೇ ಇರುವುದನ್ನು ನೋಡಿದರೆ ಈ ವಾಹನ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿ, ಉಪಯೋಗಿಸಲ್ಪಟ್ಟಂತಹ ವಾಹನವೆಂದು ದೃಢವಾಗುತ್ತದೆ. ವಾಹನದ ಮಾಲಿಕರು ಮಾಲೀಕತ್ವದ ಬಗ್ಗೆ, ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲವೆಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ, ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ

ಬಜಾಜ್ ಚೇತಕ್ ಸ್ಕೂಟರ್ ನೊಂದಣಿ ಸಂಖ್ಯೆ: ಕೆಎ-14-ಹೆಚ್-5168 (ಎಂಜೀನ್ ಸಂಖ್ಯೆ: 60ಇ95ಎ96319, ಛಾಸಿಸ್ ಸಂಖ್ಯೆ: 60ಸಿ95ಎ91198) ಶ್ರೀಗಂಧದ ತುಂಡು ಮತ್ತು ಚಕ್ಕೆ 11.00 ಕೆ.ಜಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧದ ತುಂಡುಗಳು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 20.11.2004ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎ.ಎನ್. ಕರ್ಕೀಕರ್**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್. 1757

## ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ

**ಸಂಖ್ಯೆ: ಎ3(ಬಿ1): ಅಮೊ: ಶ್ರೀಗಂಧ: ಬಜಾಜ್ ಎಂ-80:2427/ 2003-04, ದಿನಾಂಕ: 20ನೇ ನವೆಂಬರ್, 2004**

**ವಿಷಯ :** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಬಜಾಜ್ ಎಂ-80 ನೊಂದಣಿ ಸಂಖ್ಯೆ: ಕೆಎ-20-ಕೆ-2427 ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ :**
1. ವಲಯ ಅರಣ್ಯಾಧಿಕಾರಿ, ಹಣಗೆರೆ ವನ್ಯಜೀವಿ ವಲಯ, ಸಿರಿಗೆರೆ ಇವರ ಪತ್ರದ ಸಂಖ್ಯೆ: ಹವಸಿ: 115/2003-04 ದಿನಾಂಕ: 23.07.2003.
2. ಈ ಕಛೇರಿಯ ನ್ಯಾಯಾಲಯದಿಂದ ಹೊರಡಿಸಲಾದ ದಿನಾಂಕ: 05.08.2004ರ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 02.09.2004 ರಂದು ಮತ್ತು ಸಹ್ಯಾದ್ರಿ ಕನ್ನಡ ಸ್ಥಳೀಯ ದಿನ ಪತ್ರಿಕೆಯಲ್ಲಿ ದಿನಾಂಕ: 19.08.2004ರಂದು ಪ್ರಕಟಿಸಲಾಗಿರುತ್ತದೆ.

**ಪ್ರಕರಣದ ಹಿನ್ನೆಲೆ:**

ಹಣಗೆರೆ ವನ್ಯಜೀವಿ ವಲಯದ, ಕಲ್ಕೊಪ್ಪ ಬೀಟ್‌ನ ಅರಣ್ಯ ರಕ್ಷಕ ಮತ್ತು ಸಿಬ್ಬಂದಿಗಳು ದಿನಾಂಕ: 23.07.2003ರಂದು ಬಂದ ಖಚಿತ ವರ್ತಮಾನದ ಮೇರೆಗೆ, ಕಲ್ಕೊಪ್ಪ ಬೀಟ್‌ನಲ್ಲಿ ಬರುವ ತಳಲೆ ಗ್ರಾಮದ ಹತ್ತಿರ, ಮೂಗುಡ್ತಿ-ಬೆಳ್ಳೂರು ಮುಖ್ಯ ರಸ್ತೆಯಲ್ಲಿ ಕಾಯುತ್ತಿರುವಾಗ, ಬಂದ ಬಜಾಜ್ ಎಂ-80 ಸ್ಕೂಟರನ್ನು ನಿಲ್ಲಿಸಲು ಸೂಚಿಸಿದಾಗ, ಇಲಾಖಾ ಸಿಬ್ಬಂದಿಯನ್ನು ಕಂಡ ಚಾಲಕ, ಬಜಾಜ್ ಎಂ-80 ಸ್ಕೂಟರನ್ನು ನಿಲ್ಲಿಸದೇ ವೇಗವಾಗಿ ಓಡಿಸಿಕೊಂಡು ಹೋಗಿದ್ದು, ಸದರಿ ಸ್ಕೂಟರನ್ನು ಸಿಬ್ಬಂದಿಗಳು ಹಿಂಬಾಲಿಸಿದಾಗ ಮಾರ್ಗದ ಮಧ್ಯದಲ್ಲಿ ಸ್ಕೂಟರನ್ನು (ನೊಂದಣಿ ಸಂಖ್ಯೆ: ಕೆಎ-20-ಕೆ-2427) ಬಿಟ್ಟು ಪರಾರಿಯಾಗಿರುತ್ತಾನೆ. ಸದರಿ ವಾಹನವನ್ನು ಕೂಲಂಕುಷವಾಗಿ ಪರಿಶೀಲಿಸಿ ನೋಡಿದಾಗ ಅದರಲ್ಲಿ ಸುಮಾರು 7.00 ಕೆ.ಜಿ. ಶ್ರೀಗಂಧದ ಚಕ್ಕೆ ಇರುವುದನ್ನು ಕಂಡು, ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದ ಶ್ರೀಗಂಧ ಚಕ್ಕೆಯನ್ನು ಮತ್ತು ವಾಹನವನ್ನು ಸರ್ಕಾರಿ ಪರ ಅಮಾನತ್ತುಪಡಿಸಿ, ಅರಣ್ಯ ಮೊಕದ್ದಮೆ ದಾಖಲು ಮಾಡಿರುತ್ತಾರೆ. ತದನಂತರ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 86, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 144ರ ಪ್ರಕಾರ ತಕ್ಷೀರು ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ, ಶ್ರೀಗಂಧದ ಚಕ್ಕೆ ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ವಾರಸುದಾರರು ಯಾರಾದರೂ ಇದ್ದರೆ, ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಶ್ರೀಗಂಧದ ತುಂಡುಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬ ಬಗ್ಗೆ ತಿಳುವಳಿಕೆ ಪತ್ರವನ್ನು ದಿನಾಂಕ: 02.09.2004ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಮತ್ತು ಸಹ್ಯಾದ್ರಿ ಕನ್ನಡ ಸ್ಥಳೀಯ ದಿನಪತ್ರಿಕೆಯಲ್ಲಿ ದಿನಾಂಕ: 19.08.2004ರಂದು ಪ್ರಕಟಿಸಲಾಗಿರುತ್ತದೆ.

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಉಡುಪಿ ಇವರು ನೀಡಿದ ಬಿ ಎಕ್ಸ್ಟ್ರ್ಯಾಕ್ಟ್ ಪ್ರಕಾರ ವಾಹನದ ಮೂಲ ಖರೀದಿದಾರರಿಗೆ, ವಾಹನದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವ ಸಂಬಂಧ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಸೂಕ್ತ ಸಮಜಾಯಿಷಿ ನೀಡಲು ನೊಂದಾಯಿತ ಅಂಚೆ ಮೂಲಕ ದಿನಾಂಕ: 22.09.2003, 08.12.2003 ಮತ್ತು 20.02.2004 ರಂದು ಕಳುಹಿಸಿದ ನೋಟೀಸುಗಳು ಸ್ವೀಕೃತಗೊಳ್ಳದೇ ವಾಪಸ್ ಬಂದಿರುತ್ತವೆ. ಸಾಕಷ್ಟು ಕಾಲಾವಕಾಶ ಕೊಟ್ಟರೂ, ಸದರಿ ವಾಹನದ ಬಗ್ಗೆ ತಮ್ಮ ಮಾಲೀಕತ್ವವನ್ನು ದೃಢೀಕರಿಸಿ ವಾಹನವನ್ನು ವಶಕ್ಕೆ ಇದುವರೆಗೆ ಕೋರದೇ ಇರುವುದನ್ನು ನೋಡಿದರೆ ಈ ವಾಹನ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿ, ಉಪಯೋಗಿಸಲ್ಪಟ್ಟಂತಹ ವಾಹನವೆಂದು ದೃಢವಾಗುತ್ತದೆ. ವಾಹನದ ಮಾಲಿಕರು ಮಾಲೀಕತ್ವದ ಬಗ್ಗೆ, ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲವೆಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ, ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಬಜಾಜ್ ಎಂ-80 ನೊಂದಣಿ ಸಂಖ್ಯೆ: ಕೆಎ-20-ಕೆ-2427 (ಎಂಜಿನ್ ಸಂಖ್ಯೆ: 16ಇಬಿಜಿಎ62774, ಛಾಸಿಸ್ ಸಂಖ್ಯೆ: 16ಸಿಬಿಜಿಎ62003) ಮತ್ತು ಶ್ರೀಗಂಧದ ಚಕ್ಕೆ 7.00 ಕೆ.ಜಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧದ ತುಂಡುಗಳು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 20.11.2004ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎ.ಎನ್. ಕರ್ಕೀಕರ್**

ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್. 1758

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ಸಂಖ್ಯೆ: ಎ3(ಬಿ1): ಅಮೊ: ಶ್ರೀಗಂಧ: ಬೈಕ್: 2652/ 2002-03, ದಿನಾಂಕ: 20ನೇ ನವೆಂಬರ್, 2004**

**ವಿಷಯ :** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಬಜಾಜ್ ಕವಸಾಕಿ ಬಜಾಜ್ ಕೆಬಿ-100 ಮೋಟಾರ್ ಬೈಕ್ ನೊಂದಣಿ ಸಂಖ್ಯೆ: ಕೆಎ-20-ಇ-2652 ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ :** 1. ವಲಯ ಅರಣ್ಯಾಧಿಕಾರಿ, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಇವರ ಪತ್ರದ ಸಂಖ್ಯೆ: ಸಬೈ: ಅಮೊ: 2002-03 ದಿನಾಂಕ: 16.12.2002.

2. ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಉಡುಪಿ ಇವರು ನೀಡಿದ ದಿನಾಂಕ: 03.07.2003ರ ಬಿ. ಎಕ್ಸ್‌ಟ್ರಾಕ್ಟ್.

**ಪ್ರಕರಣದ ಹಿನ್ನೆಲೆ:**

ದಿನಾಂಕ: 13.12.2002ರಂದು ಗಾಜನೂರು ತನಿಖಾ ಠಾಣೆಗೆ ಮಧ್ಯಾಹ್ನ ಸುಮಾರು 1.15 ಗಂಟೆಯ ಸಮಯದಲ್ಲಿ, ತೀರ್ಥಹಳ್ಳಿ ಕಡೆಯಿಂದ ಶಿವಮೊಗ್ಗ ಕಡೆಗೆ ಬರುತ್ತಿದ್ದ ಬಜಾಜ್ ಕಾವಸಾಕಿ ಬಜಾಜ್ ಕೆಬಿ-100 (ನೊಂದಣಿ ಸಂಖ್ಯೆ: ಕೆಎ-20-ಇ-2652) ಮೋಟರ್ ಬೈಕ್‌ನ್ನು ತನಿಖಾ ಠಾಣೆಯ ಕರ್ತವ್ಯ ನಿರತ ವನಪಾಲಕರು ವಾಹನವನ್ನು ತಪಾಸಿಸುತ್ತಿದ್ದಾಗ ಸದರಿ ವಾಹನದ ಸವಾರ ಓಡಿ ಹೋಗಿದ್ದು, ವಾಹನದಲ್ಲಿ ಸುಮಾರು 4.00 ಕೆ.ಜಿ ಶ್ರೀಗಂಧದ ತುಂಡುಗಳು ಇರುವುದನ್ನು ಕಂಡು, ಅಧಿಕೃತ ರಹದಾರಿ ಪತ್ರ ಇಲ್ಲದೇ ಇರುವುದರಿಂದ ವಾಹನ ಮತ್ತು ಶ್ರೀಗಂಧವನ್ನು ಸರ್ಕಾರಿ ಅಮಾನತ್ತುಪಡಿಸಿ, ಅರಣ್ಯ ಮೊಕದ್ದಮೆ ದಾಖಲು ಮಾಡಿರುತ್ತಾರೆ. ತದನಂತರ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 86, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 144ರ ಪ್ರಕಾರ ತಕ್ಷೀರು ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ, ಶ್ರೀಗಂಧದ ತುಂಡು ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಉಡುಪಿ ಇವರು ನೀಡಿದ ಬಿ ಎಕ್ಸ್‌ಟ್ರಾಕ್ಟ್ ಪ್ರಕಾರ ವಾಹನದ ಮೂಲ ಖರೀದಿದಾರರಿಗೆ, ವಾಹನದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವ ಸಂಬಂಧ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಸೂಕ್ತ ಸಮಜಾಯಿಷಿ ನೀಡಲು ನೋಟೀಸ್ ನೀಡಲಾಗಿರುತ್ತದೆ. ಈ ನೋಟೀಸ್‌ಗೆ ಮೂಲ ಖರೀದಿದಾರರು ಸದರಿ ವಾಹನವನ್ನು ಮಾರಾಟ ಮಾಡಿರುವುದಾಗಿ ತಿಳಿಸುತ್ತಾ, ವಾಹನ ಪಡೆದ ವ್ಯಕ್ತಿಯ ವಿಳಾಸವನ್ನು ನೀಡಿರುತ್ತಾರೆ. ವಿಳಾಸ ನೀಡಿದ ವ್ಯಕ್ತಿಗೆ ನೊಂದಾಯಿತ ಅಂಚೆ ಮೂಲಕ ದಿನಾಂಕ: 20.02.2004 ರಂದು ನೋಟೀಸ್ ನೀಡಲಾಗಿದ್ದು, ಸದರಿ ನೋಟೀಸ್ ಸ್ವೀಕೃತಗೊಳ್ಳದೇ ವಾಪಸ್ ಬಂದಿರುತ್ತದೆ. ಸಾಕಷ್ಟು ಕಾಲಾವಕಾಶ ಕೊಟ್ಟರೂ, ಸದರಿ ವಾಹನದ ಬಗ್ಗೆ ತಮ್ಮ ಮಾಲೀಕತ್ವವನ್ನು ದೃಢೀಕರಿಸಿ ವಾಹನವನ್ನು ವಶಕ್ಕೆ ಇದುವರೆಗೆ ಕೋರದೇ ಇರುವುದನ್ನು ನೋಡಿದರೆ ಈ ವಾಹನ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿ, ಉಪಯೋಗಿಸಲ್ಪಟ್ಟಂತಹ ವಾಹನವೆಂದು ದೃಢವಾಗುತ್ತದೆ. ವಾಹನದ ಮಾಲಿಕರು ಮಾಲೀಕತ್ವದ ಬಗ್ಗೆ, ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲವೆಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ, ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಬಜಾಜ್ ಕಾವಸಾಕಿ ಬಜಾಜ್ ಕೆಬಿ-100 ಮೋಟಾರ್ ಬೈಕ್ ನೊಂದಣಿ ಸಂಖ್ಯೆ: ಕೆಎ-20-ಇ-2652 (ಎಂಜಿನ್ ಸಂಖ್ಯೆ: ಇ30ಸಿಎ025923, ಛಾಸಿಸ್ ಸಂಖ್ಯೆ: ಸಿ30ಸಿಎ026159) ಮತ್ತು ಶ್ರೀಗಂಧದ ತುಂಡುಗಳು 4.00 ಕೆ.ಜಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧದ ತುಂಡುಗಳು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 20.11.2004ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎ.ಎನ್. ಕರ್ಕೀಕರ್**

ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್. 1759

## ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ

**ಸಂಖ್ಯೆ: ಎ3(ಬಿ1): ಅಮೊ: ಶ್ರೀಗಂಧ: ಅಂಬಾಸಿಡರ್ ಕಾರು: 1040/ 2001-02, ದಿನಾಂಕ: 20ನೇ ನವೆಂಬರ್, 2004**

**ವಿಷಯ :** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಅಂಬಾಸಿಡರ್ ಕಾರ್ ನೊಂದಣಿ ಸಂಖ್ಯೆ: ಎಂವೈಪಿ-1040 ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ :**
1. ವಲಯ ಅರಣ್ಯಾಧಿಕಾರಿ, ಹಣಗೆರೆ ವನ್ಯಜೀವಿ ವಲಯ, ಸಿರಿಗೆರೆ ಇವರ ಪತ್ರದ ಸಂಖ್ಯೆ: ಹವಸಿ: 290/2001-02 ದಿನಾಂಕ: 31.10.2001.
2. ಈ ಕಛೇರಿಯ ನ್ಯಾಯಾಲಯದಿಂದ ಹೊರಡಿಸಲಾದ ದಿನಾಂಕ: 23.11.2001ರ ಪ್ರಕಟಣೆ ಕ್ರಾಂತಿದೀಪ ಸ್ಥಳೀಯ ಕನ್ನಡ ದಿನ ಪತ್ರಿಕೆಯಲ್ಲಿ ದಿನಾಂಕ: 26.12.2001ರಲ್ಲಿ ಪ್ರಕಟಿಸಲಾಗಿರುತ್ತದೆ.

**ಪ್ರಕರಣದ ಹಿನ್ನೆಲೆ:**

ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ಉಪ ವಿಭಾಗ, ಶಿವಮೊಗ್ಗ ಮತ್ತು ವಲಯ ಅರಣ್ಯಾಧಿಕಾರಿ, ಹಣಗೆರೆ ವನ್ಯಜೀವಿ ವಲಯ, ಸಿರಿಗೆರೆ ಇವರುಗಳು ಸಿಬ್ಬಂದಿಗಳೊಂದಿಗೆ ದಿನಾಂಕ: 31.10.2001ರಂದು ಮಧ್ಯಾಹ್ನ ಸುಮಾರು 3.00 ಗಂಟೆಯ ಸಮಯದಲ್ಲಿ ಇಲಾಖಾ ವಾಹನದಲ್ಲಿ ಬರುವೆ ಮನ್ನಾ ಜಂಗಲಿಯ ಗಸ್ತು ಕಾರ್ಯ ಮಾಡುತ್ತಿದ್ದಾಗ, ಮೂಗುಡ್ತಿ ಕ್ರಾಸ್ ಹತ್ತಿರ ಬಿಳಿ ಬಣ್ಣದ ಅಂಬಾಸಿಡರ್ ಕಾರ್ ಬರುತ್ತಿದ್ದನ್ನು ಕಂಡು, ಸಂಶಯಾಸ್ಪದವಾಗಿ ಕಾರನ್ನು ನಿಲ್ಲಿಸಲು ಸೂಚಿಸಿದಾಗ, ಕಾರಿನ ಚಾಲಕ ಕಾರನ್ನು ನಿಲ್ಲಿಸದೇ ವೇಗವಾಗಿ ಓಡಿಸಿಕೊಂಡು ಹೋಗಿರುತ್ತಾನೆ. ಸಂಶಯಗೊಂಡು ಕಾರನ್ನು ಹಿಂಬಾಲಿಸಿದಾಗ ಇಲಾಖಾ ಜೀಪಿನ ಸುಳಿವರಿತ ಆಸಾಮಿಗಳು ಮಳವಳ್ಳಿ ಅಡ್ಡ ರಸ್ತೆಯ ಹತ್ತಿರ ಕಾರನ್ನು ನಿಲ್ಲಿಸಿ) ಓಡಿಹೋಗಿರುತ್ತಾರೆ. ಸದರಿ ವಾಹನವನ್ನು ಕೂಲಂಕುಷವಾಗಿ ಪರಿಶೀಲನೆ ಮಾಡಿ ನೋಡಿದಾಗ, ಅದರಲ್ಲಿ ಸುಮಾರು 95.00 ಕೆ.ಜಿ. ಶ್ರೀಗಂಧದ ತುಂಡುಗಳು ಮತ್ತು ಚಕ್ಕೆಗಳು ಇರುವುದನ್ನು ಕಂಡು, ವಾಹನ (ನೊಂದಣಿ ಸಂಖ್ಯೆ: ಎಂವೈಪಿ-1040) ಮತ್ತು ಶ್ರೀಗಂಧವನ್ನು ಸರ್ಕಾರಿ ಪರ ಅಮಾನತ್ತುಪಡಿಸಿ, ಅರಣ್ಯ ಮೊಕದ್ದಮೆ ದಾಖಲು ಮಾಡಿರುತ್ತಾರೆ. ತದನಂತರ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 86, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 144ರ ಪ್ರಕಾರ ತಕ್ಷೀರು ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ, ಶ್ರೀಗಂಧದ ತುಂಡು ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ವಾರಸುದಾರರು ಯಾರಾದರೂ ಇದ್ದರೆ, ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಶ್ರೀಗಂಧದ ತುಂಡುಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬ ಬಗ್ಗೆ ತಿಳುವಳಿಕೆ ಪತ್ರವನ್ನು ಕನ್ನಡ ಸ್ಥಳೀಯ ದಿನಪತ್ರಿಕೆಯಾದ ಕ್ರಾಂತಿದೀಪದಲ್ಲಿ ದಿನಾಂಕ: 26.12.2001ರಲ್ಲಿ ಪ್ರಕಟಿಸಲಾಗಿರುತ್ತದೆ.

ವಾಹನದ ಬಿ ಎಕ್ಸ್ಟ್ರ್ಯಾಕ್ಟ್‌ಗಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಗುಲ್ಬರ್ಗಾ ಇವರಿಗೆ ದಿನಾಂಕ: 27.11.2001, 31.12.2001, 10.04.2002, 20.08.2002, 08.12.2003, 20.02.2004 ಹಾಗೂ 19.05.2004 ರಂದು ಕೋರಲಾಗಿದ್ದು, ಸದರಿಯವರು ಬಿ ಎಕ್ಸ್ಟ್ರ್ಯಾಕ್ಟ್ ನೀಡಿರುವುದಿಲ್ಲ. ಈ ಬಗ್ಗೆ ಉಪ ಸಾರಿಗೆ ಆಯುಕ್ತರು, ಬೆಂಗಳೂರು ರವರಿಗೂ ಸಹ ದಿನಾಂಕ: 20.02.2004ರಂದು ಕೋರಲಾಗಿರುತ್ತದೆ. ಈವರೆಗೆ ಬಿ ಎಕ್ಸ್ಟ್ರ್ಯಾಕ್ ಬಂದಿರುವುದಿಲ್ಲ. ವಾಹನದ ಮಾಲೀಕತ್ವವನ್ನು ದೃಢೀಕರಿಸಿ, ವಾಹನವನ್ನು ವಶಕ್ಕೆ ತೆಗೆದುಕೊಳ್ಳಲು ಸಾಕಷ್ಟು ಕಾಲಾವಕಾಶ ಕೊಟ್ಟರೂ, ಯಾರೊಬ್ಬರು ವಶಕ್ಕೆ ಇದುವರೆಗೆ ಕೋರದಿರುವುದನ್ನು ನೋಡಿದರೆ ಈ ವಾಹನ ಅರಣ್ಯ ಉತ್ಪನ್ನಗಳ ಕಳ್ಳಸಾಗಾಣಿಕೆಯಲ್ಲಿ ತೊಡಗಿಸಿ ಉಪಯೋಗಿಸಲ್ಪಟ್ಟ ವಾಹನವೆಂದು ದೃಢವಾಗುತ್ತದೆ. ವಾಹನದ ಮಾಲಿಕರು ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲವೆಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ, ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಅಂಬಾಸಿಡರ್ ಕಾರ್ ನೊಂದಣಿ ಸಂಖ್ಯೆ: ಎಂವೈಪಿ-1040 (ಎಂಜಿನ್ ಸಂಖ್ಯೆ: 0118803, ಛಾಸಿಸ್ ಸಂಖ್ಯೆ: 111-88520) ಮತ್ತು ಶ್ರೀಗಂಧದ ತುಂಡುಗಳು ಮತ್ತು ಚಕ್ಕೆ 95.00 ಕೆ.ಜಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧದ ತುಂಡುಗಳು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 20.11.2004ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎ.ಎನ್. ಕರ್ಕೀಕರ್**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್. 1760

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕೊಳ್ಳೆಗಾಲ ರವರ ನ್ಯಾಯಾಲಯ

**ಗಂಧದ ಕಳ್ಳಸಾಗಾಣಿಕೆ ವಾಹನಗಳ ಕುರಿತು ನೋಟೀಸು**

**ಸಂಖ್ಯೆ: ಸಿ3/ ಎಫ್.ಓ.ಸಿ/ ಕೆಜಿಎಲ್/ ಪಿಎಸ್-118/ 2000-01, ದಿನಾಂಕ: 8ನೇ ಡಿಸೆಂಬರ್, 2004**

ಈ ಕೆಳಗೆ ವಿವರಗಳೊಂದಿಗೆ ನಮೂದಿಸಿರುವ ಮೋಟಾರು ವಾಹನಗಳನ್ನು ಕೊಳ್ಳೇಗಾಲ ತಾಲ್ಲೂಕಿನ ಪೊಲೀಸರು ಹಾಗೂ ಅರಣ್ಯಾಧಿಕಾರಿಗಳು ಶ್ರೀಗಂಧದ ಸಮೇತ ಅಮಾನತ್ತುಪಡಿಸಿ ಅಧಿಕೃತ ಅಧಿಕಾರಿಗಳ ಸಮ್ಮುಖ ಹಾಜರುಪಡಿಸಿರುತ್ತಾರೆ. ಈ ವಾಹನಗಳು ಗಂಧದ

ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 86ನ್ನು ಉಲ್ಲಂಘಿಸಿರುವುದರಿಂದ ಸೆಕ್ಷನ್ 71 'ಎ' ಪ್ರಕಾರ ಕ್ರಮ ಜರುಗಿಸುವಂತೆ ಕೋರಿ ಪ್ರಕರಣವನ್ನು ದಾಖಲು ಮಾಡಿರುತ್ತಾರೆ.

**ವಾಹನದ ವಿವರಗಳು:**

| ಕ್ರಮ ಸಂಖ್ಯೆ | ವಾಹನದ ಮಾದರಿ | ರಿಜಿಸ್ಟ್ರೇಷನ್ ಸಂಖ್ಯೆ | ಪೊಲೀಸು/ ಅರಣ್ಯ ತಕ್ಷೀರು ಸಂಖ್ಯೆ | ಇಂಜಿನ್ ಸಂಖ್ಯೆ | ಛಾಸಿಸ್ ಸಂಖ್ಯೆ |
|---|---|---|---|---|---|
| 1. | ಅಂಬಾಸಿಡರ್ ಕಾರು | MEO-5806 | 118/2000 | D-94356 | 111-270436 |
| 2. | ಫಿಯೆಟ್ ಕಾರು | MYT-188 | 168/2000 | PA-28736 | 888456 |
| 3. | ಫಿಯೆಟ್ ಕಾರು | MYB-9705 | 23/2003 | - | 103D-638974 |

ಈ ಬಗ್ಗೆ ಯಾರಿಂದಲಾದರೂ ಆಕ್ಷೇಪಣೆ ಅಥವಾ ತಕರಾರು ಇದ್ದಲ್ಲಿ ಈ ನೋಟೀಸು ಪ್ರಕಟಗೊಂಡ 30 ದಿನಗಳ ಒಳಗಾಗಿ ವಾಹನದ ಮಾಲಿಕತ್ವದ ದಾಖಲೆಗಳೊಂದಿಗೆ ಸಲ್ಲಿಸಬೇಕೆಂದು ಪ್ರಚುರಪಡಿಸಲಾಗಿದೆ. ನಿಗದಿತ ಅವಧಿಯಲ್ಲಿ ಯಾವುದೇ ದಾಖಲಾತಿಗಳನ್ನು ಸಲ್ಲಿಸದಿದ್ದಲ್ಲಿ ಏಕಪಕ್ಷೀಯವಾಗಿ ತೀರ್ಮಾನಿಸಿ ಶ್ರೀಗಂಧದ ಸಮೇತ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಪಿ.ಆರ್. 1761

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಕೊಳ್ಳೇಗಾಲ ವಿಭಾಗ, ಕೊಳ್ಳೇಗಾಲ.

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ಭದ್ರಾವತಿ**

**ಸಂಖ್ಯೆ: ಎಫ್‌ಓಸಿ.ಸಿಓಎನ್.ಸಿಆರ್ 17/87-88, ದಿನಾಂಕ: 8ನೇ ಡಿಸೆಂಬರ್, 2004**

**ನಿರೂಪಣಾಧಿಕಾರಿ :** ಶ್ರೀಮತಿ ಸೀಮಾಗರ್ಗ್ ಭಾಅಸೇ
ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

**ಫಿರ್ಯಾದಿದಾರರು:**
1. ವಲಯ ಅರಣ್ಯಾಧಿಕಾರಿ, ಚನ್ನಗಿರಿ ವಲಯ, ಚನ್ನಗಿರಿ.

**ವಿರುದ್ಧ**

**ಅರ್ಜಿದಾರರು:**
1. ವೀರಣ್ಣಗೌಡ ಬಿನ್ ಕರಿಬಸಪ್ಪ
ಜಿ. ವೀರಸ್ವಾಮಿ ವಾಸಿ.
ನಿಟ್ಟೂರು ಪೋಸ್ಟ್ ಹರಿಹರ ತಾಲ್ಲೂಕು,
ಚಿತ್ರದುರ್ಗ ಜಿಲ್ಲೆ.

**ಪ್ರಕರಣದ ಹಿನ್ನೆಲೆ:**

ಚನ್ನಗಿರಿ ವಲಯ ಅರಣ್ಯಾಧಿಕಾರಿಗಳು ಮತ್ತು ಸಿಬ್ಬಂದಿಯವರು ದಿನಾಂಕ: 24.02.1998ರಂದು ಚನ್ನಗಿರಿ ಅರಣ್ಯ ವಲಯಕ್ಕೆ ಸೇರಿದ ಮರವಂಜಿ ಶಾಖೆಯ ಜಮ್ಮಾಪುರ ಗ್ರಾಮದ ಹತ್ತಿರ ರಂಗಯ್ಯನಗಿರಿ ಮೀಸಲು ಅರಣ್ಯದಲ್ಲಿ ಅರಣ್ಯ ಉತ್ಪನ್ನ ಅಕ್ರಮ ಸಾಗಾಣಿಕೆಯಾಗುತ್ತದೆ ಎಂಬ ಮೇರೆಗೆ ಕಾಯುತ್ತಾ ಕುಳಿತಿರುವಾಗ ಮೀಸಲು ಅರಣ್ಯ ರಂಗಯ್ಯನಗಿರಿ ಕಡೆಯಿಂದ ಒಂದು ಲಾರಿ ಬರುವುದನ್ನು ತಡೆದು ಪರಿಶೀಲಿಸಿದ್ದು ಲಾರಿಯ ಭರ್ತಿ ಕಾಡುಜಾತಿ ಸೌದೆಯು ತುಂಬಿರುವುದು ಕಂಡು ಬಂದಿತು ಸದರಿ ಸೌದೆಯ ಬಗ್ಗೆ ರಹದಾರಿ ವಿಚಾರಿಸಲಾಗಿ ಯಾವುದೇ ರಹದಾರಿ ಇಲ್ಲವೆಂದು ತಿಳಿಸಿದರು. ಆತನ ಹೆಸರು ವಿಳಾಸ ವಿಚಾರಿಸಿದಾಗ ಚಂದ್ರಪ್ಪ ಬಿನ್ ಶಾಂತಪ್ಪ ಬಳ್ಳಾರಿ ಜಿಲ್ಲೆ, ಸದರಿ ಮಾಲಿಕರ ಹೆಸರು ವೀರಸ್ವಾಮಿ, ಹರಿಹರ ತಾಲ್ಲೂಕು ನಿಬ್ಬೂರು ಗ್ರಾಮದ ವಾಸಿಯೆಂದು ತಿಳಿಸಿರುತ್ತಾರೆ ಹಾಗೂ ಬಸವಾಪಟ್ಟಣ ವಾಸಿಯೊಬ್ಬರು ಸುಮಾರು 10-12 ಜನರೊಂದಿಗೆ ಲಾರಿಯನ್ನು ಬಾಡಿಗೆ ಪಡೆದು ಲಾರಿಯಲ್ಲಿ ಸೌದೆಯನ್ನು ತುಂಬಿಸಿಕೊಂಡು ಬರುತ್ತಿರುವಾಗ ಇಲಾಖೆಯವರು ಬಂದಿರುವ ವರ್ತಮಾನ ಗೊತ್ತಾಗಿ ಲಾರಿಯಿಂದ ಇಳಿದು ಕಾಡಿನಲ್ಲಿ ಪರಾರಿಯಾದರೆಂದು ತಿಳಿಸಿದರು. ಲಾರಿಯನ್ನು ಪರಿಶೀಲನೆ ಮಾಡಿದಾಗ ಲಾರಿಯ ನೊಂದಾವಣೆ ಸಂಖ್ಯೆ: ಎಂಇಐ 4050 ಆಗಿರುತ್ತದೆ. ಲಾರಿಯನ್ನು ಹಾಗೂ ಲಾರಿಯಲ್ಲಿ ತುಂಬಿರುವ ಸೌದೆಯನ್ನು ಸರ್ಕಾರದ ಪರ ವಶಕ್ಕೆ ತೆಗೆದುಕೊಂಡು ಸೌದೆಯನ್ನು ಮೀಟರ್ ಮಾಪನದಲ್ಲಿ ಅಳತೆ ಮಾಡಲಾಯಿತು ಅಳತೆ ವಿವರ 13.5 ಘ.ಮೀ. ಇರುತ್ತದೆ. ವಶಪಡಿಸಿಕೊಂಡ ಸೌದೆ ತುಂಡುಗಳಿಗೆ ಇಲಾಖಾ ಛಾಪಾ ಮುದ್ರಿಸಿ ಸ್ಥಳದಲ್ಲಿ ಮಹಜರ್ ಕ್ರಮ ಜರುಗಿಸಿ ಮುಂದಿನ ನಡವಳಿಕೆಯ ಬಗ್ಗೆ ವಲಯ ಅರಣ್ಯಾಧಿಕಾರಿಗಳ ಕಛೇರಿಗೆ ತೆಗೆದುಕೊಂಡು ಹೋಗಲು ತೀರ್ಮಾನಿಸಿರುತ್ತಾರೆ. ವಶಪಡಿಸಿಕೊಂಡ ವಾಹನ ಅರಣ್ಯ ಉತ್ಪನ್ನವನ್ನು ವಲಯ ಅರಣ್ಯಾಧಿಕಾರಿ ವರದಿಯೊಂದಿಗೆ ಈ ನ್ಯಾಯಾಲಯದ ಸಮಕ್ಷಮ ಹಾಜರುಪಡಿಸಿ ಅರಣ್ಯ ಕಾಯಿದೆ 71(ಎ) ಪ್ರಕಾರ ಕ್ರಮ ಜರುಗಿಸಲು ಕೋರಿಕೊಂಡಿರುತ್ತಾರೆ. ಸದರಿ ಪ್ರಕರಣದ ದಾಖಲಾತಿಗಳನ್ನು ಪರಿಶೀಲಿಸಿ ಪ್ರಕರಣವನ್ನು ಅರಣ್ಯ ಕಾಯಿದೆ 71(ಎ) ಪ್ರಕಾರ ಜರುಗಿಸಿ ವಾಹನವನ್ನು ವಲಯ ಅರಣ್ಯಾಧಿಕಾರಿ ಚನ್ನಗಿರಿ ವಲಯ ಚನ್ನಗಿರಿ ರವರ ಸುರಕ್ಷತೆಗೆ ದಿನಾಂಕ: 29.02.88ರಂದು ವಹಿಸಿಕೊಟ್ಟಿರುತ್ತದೆ. ದಿನಾಂಕ: 19.03.1988ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬೆಳಗಾಂ ಇವರಿಗೆ ಪತ್ರ ಬರೆದು ವಾಹನದ ಮಾಲಿಕರ ಹಾಗೂ ವಾಹನದ ವಿವರವುಳ್ಳ ಬಿ ಎಕ್ಸ್ಟ್ರಾಕ್ಟ್‌ನ ಪ್ರತಿ ಕಳುಹಿಸಿ ಕೊಡಲು ಕೋರಿರುತ್ತಾರೆ. ದಿನಾಂಕ: 30.03.1989ರಂದು ವಾಹನದ ವಿವರವನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಚಾರಪಡಿಸಿ ಪ್ರಕಟಿಸಿರುತ್ತದೆ. ಹಾಗೂ ದಿನಾಂಕ: 29.03.1989ರಂದು ಸಂಯುಕ್ತ ಕರ್ನಾಟಕ ದಿನ ಪತ್ರಿಕೆಯಲ್ಲಿ ವಾಹನದ ವಿವರವನ್ನು ಪ್ರಕಟಿಸಿ 30 ದಿನಗಳ ಕಾಲಾವಕಾಶ ನೀಡಿ ವಾಹನದ ವಾರಸುದಾರರು ಅಧಿಕೃತ ದಾಖಲಾತಿಗಳೊಂದಿಗೆ ಸಮಜಾಯಿಷಿ ನೀಡಲು ಪ್ರಚಾರ ಪಡಿಸಿರುತ್ತದೆ.

ದಿನಾಂಕ: 21.05.88ರಂದು ವಾಹನದ ಮಾಲಿಕರಾದ ಶ್ರೀ ವೀರಣ್ಣಗೌಡ ಇವರು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ವಾಹನವನ್ನು ಬಿಡುಗಡೆ ಕೋರಿರುತ್ತಾರೆ.

ವಾಹನದ ಮಾಲಿಕರಿಗೆ 21.05.88, 04.06.88, 26.05.88, 23.07.88, 20.08.88, 03.09.1988, 24.09.88, 29.11.1988, 27.12.1988, 21.02.1989ರಂದು ಅರ್ಜಿದಾರರಿಗೆ ನೋಟೀಸ್ ಜಾರಿ ಮಾಡಿ ನ್ಯಾಯಾಲಯದ ಸಮಕ್ಷಮ ದಾಖಲಾತಿಗಳನ್ನು ಹಾಜರುಪಡಿಸಲು ಸೂಚಿಸಿರುತ್ತದೆ. ದಿನಾಂಕ:18.11.1988ರಂದು ದಿನಾಂಕ: 20.02.1989ರಂದು ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ) ಅನ್ವಯ ನೋಟೀಸ್ ನೀಡಿ ಸಮಜಾಯಿಸಿ ಕೇಳಿರುತ್ತದೆ. ವಾಹನದ ಮಾಲಿಕರು ಈ ನ್ಯಾಯಾಲಯದ ಯಾವುದೇ ನೋಟೀಸನ್ನು ಪಡೆಯದೆ ಮತ್ತು ಸಮಜಾಯಿಸಿಯನ್ನು ಸಹ

ನೀಡಿರುವುದಿಲ್ಲ. ಆದ್ದರಿಂದ ವಾಹನದ ಮಾಲಿಕರಿಗೆ ಈ ಪ್ರಕರಣದ ವಾಹನಕ್ಕೆ ಸಂಬಂಧಿಸಿದಂತೆ ಆಸಕ್ತಿಯಿಲ್ಲವೆಂದು ಪರಿಗಣಿಸಿ ವಾಹನವನ್ನು ಬಿಡುಗಡೆ ಕೋರಿದ ಅರ್ಜಿಯನ್ನು ಈ ನ್ಯಾಯಾಲಯವು ದಿನಾಂಕ: 24.02.1990ರಂದು ತಿರಸ್ಕರಿಸಿ ಆದೇಶ ಹೊರಡಿಸಿರುತ್ತದೆ.

ವಾಹನದ ಮಾಲಿಕರು ಈ ನ್ಯಾಯಾಲಯದ ಆದೇಶದ ವಿರುದ್ಧ ಶಿವಮೊಗ್ಗ ಜಿಲ್ಲಾ ಸತ್ರ ನ್ಯಾಯಾಲಯದಲ್ಲಿ ಕ್ರಿಮಿನಲ್ ಮಿಸ್ ಅಪೀಲ್ ನಂ. 23/90 ರಲ್ಲಿ ಮೇಲ್ಮನವಿ ಸಲ್ಲಿಸಿದ್ದು ಮಾನ್ಯ ನ್ಯಾಯಾಲಯವು ಈ ನ್ಯಾಯಾಲಯದಿಂದ ದಿನಾಂಕ: 24.02.1990ರಂದು ಹೊರಡಿಸಿದ ಆದೇಶವನ್ನು ಬದಿಗೊತ್ತಿ ಕಾನೂನಿನ ಪ್ರಕಾರ ಪ್ರಕರಣದ ವಿಚಾರಣೆಯನ್ನು ನಡೆಸಲು ತಿಳಿಸಿ ಅರ್ಜಿದಾರರಿಗೆ ದಿನಾಂಕ: 31.01.92ರಂದು ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ಸಮಕ್ಷಮ ಹಾಜರಾಗಲು ನಿರ್ದೇಶಿಸಿ ದಿನಾಂಕ: 30.12.91ರಂದು ಆದೇಶ ಹೊರಡಿಸಿರುತ್ತದೆ.

ಈ ಪ್ರಕರಣದ ಬಗ್ಗೆ ಅಂತಿಮ ಆದೇಶ ಹೊರಡಿಸಲು ಪ್ರಕರಣದ ವಿಚಾರಣೆಯನ್ನು ದಿನಾಂಕ: 30.01.92 ರಿಂದ 24.07.2002ರ ವರೆಗೆ ಹಲವಾರು ದಿನಾಂಕಗಳಂದು ನಡೆಸಲಾಯಿತು ಅಭಿಯೋಜನೆ ಸಾಕ್ಷಿದಾರರಿಗೆ ಹಾಗೂ ವಾಹನದ ಮಾಲಿಕರಿಗೆ ನ್ಯಾಯಾಲಯಕ್ಕೆ ಹಾಜರಾಗಲು ನೋಟೀಸ್ ನೀಡಿರುತ್ತದೆ. ಅಭಿಯೋಜನಾ ಸಾಕ್ಷಿದಾರರಾದ ಶ್ರೀ ಜೆ.ಬಿ. ನಾಯಕ್, ವಲಯ ಅರಣ್ಯಾಧಿಕಾರಿ ಇವರು ದಿನಾಂಕ: 18.09.1992 ರಂದು ಶ್ರೀ ನೀಲಯ್ಯ ವಲಯ ಅರಣ್ಯಾಧಿಕಾರಿ ಇವರು ದಿನಾಂಕ: 27.06.2001ರಂದು ಸಾಕ್ಷಿ ನುಡಿದಿರುತ್ತಾರೆ. ವಾಹನದ ಮಾಲಿಕರಾದ ಶ್ರೀ ಈರಣ್ಣಗೌಡ ಬಿನ್ ಕರಿಬಸಪ್ಪ ಇವರು ದಿನಾಂಕ: 31.10.2001ರಂದು ಇವರು ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ.

ಈ ಮೇಲ್ಕಂಡ ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಂಡ ವಾಹನದ ಬಗ್ಗೆ ಅಂತಿಮ ಆದೇಶ ಹೊರಡಿಸಲು ಈ ಕೆಳಕಂಡ ಅಂಶಗಳನ್ನು ಪರಿಶೀಲಿಸಿರುವುದು ಅವಶ್ಯವಾಗಿದೆ.

**ಅಂಶ-1**

ವಾಹನ ಲಾರಿ ಸಂಖ್ಯೆ: ಎಂ.ಇ.ಐ.4050 ದಿನಾಂಕ: 24.02.88ರಂದು 13.55 ಘ.ಮೀ. ಸೌದೆ ಕಳ್ಳಸಾಗಾಣಿಕೆಯ ಸಂಬಂಧ ಅಮಾನತ್ತು ಪಡಿಸಿರುವುದಾಗಿ ಹಾಗೂ ಇದರಿಂದ ಅರಣ್ಯ ಅಪರಾಧ ಪ್ರಕರಣ ದಾಖಲಾಗಿದೆಯೇ?

**ಅಂಶ-2**

ಅಂಶ-1 ರುಜುವಾತು ಆದಲ್ಲಿ ಸದರಿ ಅಪರಾದವು ವಾಹನದ ಮಾಲಿಕರಿಗೆ ಅಥವಾ ಅವರ ಪ್ರತಿನಿಧಿಗೆ ಅಥವಾ ವಾಹನ ಚಾರ್ಜ್ ಪಡೆದವರಿಗೆ (ಚಾಲಕರಿಗೆ) ತಿಳುವಳಿಕೆ ಮತ್ತು ಶಾಮೀಲಾಗಿರದೇ ಅಪರಾಧವಾಗಿದೆ ಎಂದು ಡಿಫೆನ್ಸ್‌ರವರು ರುಜುವಾತುಪಡಿಸಿರುವರೇ ಹಾಗೂ ಅವರೆಲ್ಲರೂ ಅಗತ್ಯವಾದ ಮತ್ತು ಸಾಧ್ಯವಾಗಬಹುದಾದ ಎಲ್ಲಾ ರೀತಿಯ ಮುಂಜಾಗ್ರತಾ ಕ್ರಮ ಕೈಗೊಂಡಿರುವವರೇ ಎಂದು ರುಜುವಾತುಪಡಿಸಿರುತ್ತಾರೆಯೇ?

**ಅಂಶ-3**

ಆದೇಶವೇನು

**ಕಾರಣಗಳು**

ದಿನಾಂಕ: 24.02.88ರಂದು ಚನ್ನಗಿರಿ ವಲಯಕ್ಕೆ ಸೇರಿದ ಮರವಂಜಿ ಶಾಖೆಯ ಜಮ್ಮಾಪುರ ಗ್ರಾಮದ ಹತ್ತಿರ ರಂಗಯ್ಯನಗಿರಿ ಮೀಸಲು ಅರಣ್ಯದಲ್ಲಿ ಲಾರಿ ನಂ. ಎಂ.ಇ.ಐ. 4050 ರಲ್ಲಿ ಅಕ್ರಮವಾಗಿ ಕಾಡು ಜಾತಿ ಸೌದೆ 13.500 ಎಂ3 ಗಳನ್ನು ಸಾಗಿಸುತ್ತಿರುವಾಗ ಪತ್ತೆ ಹಚ್ಚಿ ವಶಪಡಿಸಿಕೊಂಡು ಸ್ಥಳದಲ್ಲಿ ಪಂಚನಾಮೆಯನ್ನು ಜರುಗಿಸಿ ಅರಣ್ಯ ಮೊಕದ್ದಮೆ ದಾಖಲು ಮಾಡಿ ಅಮಾನತ್ತುಪಡಿಸಿರುತ್ತಾರೆ. ಸದರಿ ಪ್ರಕರಣವನ್ನು ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಪ್ರಕಾರ ಕ್ರಮ ಜರುಗಿಸಲು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ವಾಹನವನ್ನು ಹಾಗೂ ಪ್ರಕರಣಕ್ಕೆ ಸಂಬಂಧಿಸಿದ ಕಾಡುಜಾತಿ ಸೌದೆಯನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೂ ವಲಯ ಅರಣ್ಯಾಧಿಕಾರಿ ಚನ್ನಗಿರಿರವರ ವಶಕ್ಕೆ ಸುರಕ್ಷತೆಗೆ ನೀಡಿರುತ್ತದೆ.

ಈ ಪ್ರಕರಣದಲ್ಲಿ ದಿನಾಂಕ: 18.09.92 ಮತ್ತು 27.06.2001ರಂದು ಕ್ರಮವಾಗಿ ಪಿಡಬ್ಲ್ಯೂ-1 ಶ್ರೀ ಜೆ.ಬಿ. ನಾಯಕ್ ವಲಯ ಅರಣ್ಯಾಧಿಕಾರಿ, ಪಿಡಬ್ಲ್ಯೂ-2 ನೀಲಯ್ಯ ವಲಯ ಅರಣ್ಯಾಧಿಕಾರಿ ಇವರು ನ್ಯಾಯಾಲಯಕ್ಕೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ ಅವರು ನೀಡಿದ ಹೇಳಿಕೆಯಂತೆ ದಿನಾಂಕ: 24.02.88ರಂದು ಬಂದ ಖಚಿತ ವರ್ತಮಾನದ ಪ್ರಕಾರ ಸಿಬ್ಬಂದಿಯವರೊಂದಿಗೆ ಜಮ್ಮಾಪುರದಿಂದ ರಂಗಯ್ಯನಗಿರಿ ಮನ್ನಾ ಜಂಗಲಿಗೆ ಹೋಗುವ ದಾರಿಯಲ್ಲಿ ಮುಂಜಾನೆ 2 ಗಂಟೆ ಹೊತ್ತಿನಲ್ಲಿ ಕಾಯುತ್ತಾ ಇದ್ದು ಮುಂಜಾನೆ 5.00 ಗಂಟೆಯ ಹೊತ್ತಿಗೆ ರಂಗಯ್ಯನಗಿರಿ ಮನ್ನಾ ಜಂಗಲಿಯಿಂದ ಒಂದು ಲಾರಿ ಚನ್ನಗಿರಿ ಮತ್ತು ಅಜ್ಜಂಪುರ ರಸ್ತೆಯ ಕಡೆ ಬಂದಿತು ನಾವುಗಳು ಲಾರಿಯನ್ನು ಮಧ್ಯದಲ್ಲಿಯೇ ನಿಲ್ಲಿಸಲಾಯಿತು ಸದರಿ ಲಾರಿ ನಂ. ಎಂ.ಇ.ಐ.4050 ಆಗಿರುತ್ತದೆ ಲಾರಿಯಲ್ಲಿ ಹಸಿ ಸೌದೆ ಇದ್ದಿತು ಲಾರಿಯ ಚಾಲಕನ ಹೆಸರು ಚಂದ್ರಣ್ಣ ಎಂದು ತಿಳಿದು ಬಂದಿತು. ಸದರಿ ಲಾರಿಯಲ್ಲಿದ್ದ ಹಸಿ ಸೌದೆಗೆ ಪರವಾನಿಗೆ ಇರಲಿಲ್ಲ. ಅದರ ಮೇಲೆ ಸರ್ಕಾರದ ಮೊಹರು ಛಾಪಾ ಇರುವುದಿಲ್ಲ ಅದನ್ನು ರಂಗಯ್ಯನ ಗಿರಿ ಮನ್ನಾ ಜಂಗಲಿಯಿಂದ ಅಕ್ರಮವಾಗಿ ತಂದಿರುತ್ತಾರೆ. ಸದರಿ ಲಾರಿಯನ್ನು ಸೌದೆಯನ್ನು ಅಮಾನತ್ತುಪಡಿಸಿ ಲಾರಿಯಲ್ಲಿದ್ದ ಹಸಿ ಸೌದೆಯನ್ನು ಅಳತೆ ಮಾಡಲಾಯಿತು ಹಸಿ ಸೌದೆಯ ಒಟ್ಟು 13.500 ಘ.ಮೀ. ಇತ್ತೆಂದು ತಿಳಿಯಿತು. ಸದರಿ ಲಾರಿ ಹಸಿ ಸೌದೆ ಮತ್ತು ಡ್ರೈವರ್ ಸಮೇತ ಸರ್ಕಾರದ ಪರ ವಶಪಡಿಸಿ ಕಛೇರಿಗೆ ತರಲಾಯಿತು. ಸದರಿ ಮೊಕದ್ದಮೆಯ ಸಂಬಂಧಿಸಿದಂತೆ ಸ್ಥಳದಲ್ಲಿ ಪಂಚನಾಮೆಯನ್ನು ತಯಾರಿಸಲಾಯಿತು. ಅದನ್ನು ನಿಶಾನೆ ಪಿ1 ಎಂದು ಗುರುತಿಸಿದ್ದು ಅದರಲ್ಲಿರುವ ಸಹಿಯನ್ನು ನಿಶಾನೆ ಪಿ1ಎ ಮತ್ತು ಪಿ1ಬಿ ಎಂದು ಗುರುತಿಸಿಕೊಂಡಿರುತ್ತಾರೆ. ಈ ಪ್ರಕರಣದ ಬಗ್ಗೆ ಪ್ರಥಮ ಮಾಹಿತಿ ವರ್ತಮಾನ ಸಲ್ಲಿಸಿದ್ದು ಅದನ್ನು ನಿಶಾನೆ ಪಿ3 ಮತ್ತು ಪಿಡಬ್ಲ್ಯೂ1 ಸಾಕ್ಷಿದಾರ ಸಹಿಯನ್ನು ಪಿ3ಎ ಎಂದು ಗುರುತಿಸಿಕೊಳ್ಳಲಾಯಿತು. ಸದರಿ ಮೊಕದ್ದಮೆಗೆ ಸಂಬಂಧಿಸಿದ ಮಾಲು ಜಪ್ತಿ ವರದಿಯನ್ನು ನಿಶಾನೆ ಪಿ4 ಎಂದು ಮತ್ತು ಸಹಿಯನ್ನು ನಿಶಾನೆ ಪಿ4ಎ ಎಂದು ಗುರುತಿಸಲಾಯಿತು ಲಾರಿ ಮತ್ತು ಹಸಿ ಸೌದೆಯನ್ನು ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ಮುಂದೆ ಹಾಜರುಪಡಿಸಿದ್ದು ಸದರಿ ವರದಿಯನ್ನು ನಿಶಾನೆ ಪಿ2ಎ ಮತ್ತು ಫಿರ್ಯಾದಿದಾರರ ಸಹಿಯನ್ನು ಪಿ2 ಎಂದು ಗುರುತಿಸಿಕೊಂಡಿರುತ್ತಾರೆ. ಲಾರಿಯನ್ನು ವಶಪಡಿಸಿಕೊಂಡಾಗ ಅದರಲ್ಲಿ ಯಾವುದೇ ಲಾರಿಗೆ ಸಂಬಂಧಿಸಿದ ಕಾಗದ ಪತ್ರಗಳು ಇರಲಿಲ್ಲ ನಾವು ಲಾರಿಯನ್ನು ವಶಪಡಿಸಿಕೊಂಡ ಸ್ಥಳ ರಂಗಯ್ಯನಗಿರಿ ಮನ್ನಾ ಜಂಗಲಿ ಆಗಿರುತ್ತದೆ. ಸದರಿ ಮನ್ನಾ ಜಂಗಲಿಗೆ ಇಲಾಖೆಯ ಸಿಬ್ಬಂದಿಯ ಹೊರತು ಬೇರೆಯವರಿಗೆ ಒಳಗೆ ಹೋಗಲು ಅನುಮತಿ ಇರುವುದಿಲ್ಲ.

ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ ಸಾಕ್ಷಿದಾರರ ಪಿಡಬ್ಲ್ಯೂ-1 ಮತ್ತು ಪಿಡಬ್ಲ್ಯೂ-2 ರವರು ಹೇಳಿಕೆ ನೀಡಿ ಅಕ್ರಮ ಕಳ್ಳಸಾಗಾಣಿಕೆಯ ವರ್ತಮಾನ ಬಂದಾಗ ಸುಮಾರು ರಾತ್ರಿ 12-30 ಗಂಟೆಯಾಗಿತ್ತು ಘಟನೆಯ ಸ್ಥಳಕ್ಕೆ ಬಾಡಿಗೆ ವಾಹನದ ಮೂಲಕ ಹೋಗಿರುತ್ತದೆ ಟ್ಯಾಕ್ಸಿ ಚಾಲಕನ ಹೆಸರು ತಿಪ್ಪೆಸ್ವಾಮಿ ಟ್ಯಾಕ್ಸಿ ನಂ. ಮರೆತಿರುತ್ತದೆ. ಘಟನೆ ನಡೆದ ಸ್ಥಳವು ವಲಯ ಅರಣ್ಯಾಧಿಕಾರಿ ಕಛೇರಿಯಿಂದ

ಸುಮಾರು 10. ಕಿ.ಮೀ. ದೂರದಲ್ಲಿರುತ್ತದೆ. ಮುಖ್ಯ ರಸ್ತೆಯಿಂದ ಸುಮಾರು 50 ಮೀಟರ್ ಅಂತರದಲ್ಲಿ ಮನ್ನಾ ಜಂಗಲಿಗೆ ಹೋಗುವ ರಸ್ತೆಯ ಪಕ್ಕದಲ್ಲಿ ಕಾಯುತ್ತಿದ್ದೆವು ನಾನು ಹೋದ ಟ್ಯಾಕ್ಸಿ ಮುಖ್ಯ ರಸ್ತೆಯಲ್ಲಿತ್ತು ನಾವು ಮತ್ತು ಸಿಬ್ಬಂದಿ 50 ಮೀಟರ್ ಒಳಗೆ ಮನ್ನಾ ಜಂಗಲಿಗೆ ಹೋಗುವ ರಸ್ತೆಯಲ್ಲಿ ನಡೆದುಕೊಂಡು ಹೋದೆವು ಲಾರಿಯು ಮನ್ನಾ ಜಂಗಲಿಯಿಂದ ಮುಖ್ಯ ರಸ್ತೆಗೆ ಬರುತ್ತಿತ್ತು ಲಾರಿಯನ್ನು ನಿಲ್ಲಿಸಲು ಸನ್ನೆ ಮಾಡುತ್ತಿದ್ದಂತೆಯೇ ಸಮವಸ್ತ್ರವನ್ನು ಕಂಡು ಲಾರಿಯನ್ನು ನಿಲ್ಲಿಸಲಾಯಿತು ಸದರಿ ಲಾರಿಯಲ್ಲಿ ಆ ವೇಳೆಯಲ್ಲಿ ಚಾಲಕನನ್ನು ಬಿಟ್ಟು ಬೇರೆ ಯಾರೂ ಇರಲಿಲ್ಲ ಸೌದೆಯು ಲಾರಿಯ ಬಾಡಿಯ ಮೇಲೆ ಇತ್ತು ಸದರಿ ಮಹಜರ್ ಮುನ್ನ ಜಂಗಲಿಯಲ್ಲಿ ಮಾಡಿದ್ದರಿಂದ ಖಾಸಗಿ ಪಂಚರ ರುಜುವನ್ನು ಪಡೆಯಲಾಗಲಿಲ್ಲ ಸದರಿ ಮಹಜರನ್ನು ಮುಂಜಾನೆ 6 ಗಂಟೆಯಿಂದ 8 ಗಂಟೆಯವರೆಗೆ ಮಾಡಲಾಯಿತು ಎಂದು ಪಾಟೀಸವಾಲಿಗೆ ಉತ್ತರ ನೀಡಿರುತ್ತಾರೆ.

ಮೇಲ್ಕಂಡ ಪಿಡಬ್ಲ್ಯೂ-1 ಹಾಗೂ 2 ಸಾಕ್ಷಿದಾರರು ನೀಡಿದ ಹೇಳಿಕೆ ಮತ್ತು ಸ್ಥಳ ಮಹಜರ್‌ನಲ್ಲಿರುವ ಎಲ್ಲಾ ಅಂಶಗಳು ಒಂದಕ್ಕೊಂದು ತಾಳೆ ಹೊಂದಿದ್ದು ಯಾವುದೇ ವಿರೋಧ ಹೇಳಿಕೆಗಳು ಬಂದಿರುವುದಿಲ್ಲ ಅಲ್ಲದೇ ಫಿರ್ಯಾದಿದಾರರು ಕಾನೂನು ಪ್ರಕಾರ ಎಲ್ಲಾ ದಾಖಲಾತಿಗಳನ್ನು ಸಿದ್ದಪಡಿಸಿ ನ್ಯಾಯಾಲಯಕ್ಕೆ ಸಾಕ್ಷ್ಯಧಾರವಾಗಿ ಹಾಜರುಪಡಿಸಿ ಗುರುತಿಸಿಕೊಂಡಿರುತ್ತಾರೆ. ವಾಹನ ಲಾರಿ ಸಂಖ್ಯೆ: ಎಂ.ಇ.ಐ. 4050 ರಲ್ಲಿ ಅಕ್ರಮವಾಗಿ ರಹದಾರಿಯಿಲ್ಲದೇ ಕಾಡುಜಾತಿ ಸೌದೆ 13.5 ಘ.ಮೀ. ಸೌದೆಯನ್ನು ಸಾಗಾಣಿಕೆ ಮಾಡುತ್ತಿರುವುದನ್ನು ಖಚಿತ ಪಡಿಸಿರುತ್ತಾರೆ ಹಾಗೂ ಅರಣ್ಯ ಕಾಯಿದೆ ಉಲ್ಲಂಘನೆ ಮಾಡಿರುವುದನ್ನು ಸಹ ದೃಢಪಡಿಸಿರುತ್ತಾರೆ. ಆದ್ದರಿಂದ ಅಂಶ1 ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ-2**

ಚನ್ನಗಿರಿ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ದಿನಾಂಕ: 24.02.88ರಂದು ಚನ್ನಗಿರಿ ಅರಣ್ಯ ವಲಯಕ್ಕೆ ಸೇರಿದ ಮರವಂಜಿ ಶಾಖೆಯ ಜಮ್ಮಾಪುರ ಗ್ರಾಮದ ಹತ್ತಿರ ರಂಗಯ್ಯನಗಿರಿ ಮೀಸಲು ಅರಣ್ಯದಲ್ಲಿ ಅಕ್ರಮ ಕಾಡುಜಾತಿ ಸೌದೆ 13.5 ಘ.ಮೀ. ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆ ಹಚ್ಚಿ ಒಬ್ಬ ಅಪರಾಧಿಯ ಸಮೇತ ವಶಪಡಿಸಿಕೊಂಡು ಸ್ಥಳದಲ್ಲಿ ಮಹಜರ್ ಕ್ರಮ ಜರುಗಿಸಿ ಈ ನ್ಯಾಯಾಲಯದ ಸಮಕ್ಷಮ ಹಾಜರು ಪಡಿಸಿರುತ್ತಾರೆ. ಸದರಿ ವಾಹನವನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೂ ವಲಯ ಅರಣ್ಯಾಧಿಕಾರಿ ಚನ್ನಗಿರಿ ವಲಯ ಚನ್ನಗಿರಿರವರ ವಶಕ್ಕೆ ಸುರಕ್ಷತೆಗೆ ನೀಡಿರುತ್ತದೆ. ಸದರಿ ವಾಹನವು ಬೆಳಗಾಂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯಲ್ಲಿ ನೊಂದಾವಣಿ ಆಗಿದ್ದು ವಾಹನದ ಮಾಲಿಕರ ಹಾಗೂ ವಾಹನದ ವಿವರವುಳ್ಳ ಬಿ ವಹಿಯನ್ನು ಒಪ್ಪಿಸಲು ಪತ್ರ ಬರೆದಿರುತ್ತದೆ ಹಾಗೂ ವಾಹನದ ವಿವರವನ್ನು ಕರ್ನಾಟಕ ರಾಜ್ಯ ಪತ್ರ ಹಾಗೂ ದೈನಿಕ ಪತ್ರಿಕೆಯಲ್ಲಿ ಪ್ರಚಾರ ಪಡಿಸಿ ವಾಹನದ ಮಾಲಿಕತ್ವದ ಬಗ್ಗೆ ಮತ್ತು ವಾಹನದಲ್ಲಿ ನಡೆದ ಅಕ್ರಮ ಚಟುವಟಿಕೆಯಲ್ಲಿ ವಾಹನದ ವಾರಸುದಾರರ ಪಾತ್ರ ಇಲ್ಲದಿರುವ ಬಗ್ಗೆ ಅಧಿಕೃತ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಲು ಪ್ರಕಟಿಸಿರುತ್ತದೆ. ವಾಹನದ ಮಾಲಿಕರು ದಿನಾಂಕ: 21.05.88 ರಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ವಾಹನ ಬಿಡುಗಡೆ ಕೋರಿರುತ್ತಾರೆ ಅವರಿಗೆ ಅರಣ್ಯ ಕಾಯಿದೆ 71 ಬಿ ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿ ಸಮಜಾಯಿಸಿ ಕೇಳಿರುತ್ತದೆ. ಅಲ್ಲದೇ ನ್ಯಾಯಾಲಯಕ್ಕೆ ಹಾಜರಾಗಲು ಅನೇಕ ಬಾರಿ ನೋಟಿಸ್ ನೀಡಿದ್ದು ವಾಹನದ ಮಾಲಿಕರು ಯಾವುದೇ ವಿಚಾರಣೆಗೂ ಹಾಜರಾಗದೇ ಮತ್ತು ಈ ನ್ಯಾಯಾಲಯಕ್ಕೆ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿರುವುದಿಲ್ಲವಾದ್ದರಿಂದ ಸದರಿ ವಾಹನದ ಮೇಲೆ ವಾಹನದ ಮಾಲಿಕರಿಗೆ ಆಸಕ್ತಿಯಿಲ್ಲವೆಂದು ವಾಹನದ ಬಿಡುಗಡೆ ಅರ್ಜಿಯನ್ನು ದಿನಾಂಕ: 24.02.90ರ ಆದೇಶದಲ್ಲಿ ತಿರಸ್ಕರಿಸಿರುತ್ತದೆ ವಾಹನದ ಮಾಲಿಕರು ಮೇಲ್ಮನವಿ ಸಲ್ಲಿಸಿದ್ದು ಮಾನ್ಯ ನ್ಯಾಯಾಲಯವು ಈ ನ್ಯಾಯಾಲಯದ ಆದೇಶವನ್ನು ಬದಿಗೊತ್ತಿ ಅರ್ಜಿದಾರರ ಅರ್ಜಿಯನ್ನು ಕಾನೂನಿನ ಪ್ರಕಾರ ವಿಲೇ ಮಾಡಲು ತಿಳಿಸಿ ದಿನಾಂಕ: 30.12.91ರಂದು ಆದೇಶ ಹೊರಡಿಸಿರುತ್ತದೆ.

ಈ ಪ್ರಕರಣದ ಬಗ್ಗೆ ಅಂತಿಮ ಆದೇಶ ಹೊರಡಿಸಲು ಅರ್ಜಿದಾರ ವಾಹನದ ಮಾಲಿಕರಾದ ಶ್ರೀ ವೀರಣ್ಣಗೌಡ ಇವರನ್ನು ಪ್ರತಿವಾದಿಯ ವಕೀಲರು ಈ ನ್ಯಾಯಾಲಯಕ್ಕೆ ಹಾಜರುಪಡಿಸಿ ಅವರ ಹೇಳಿಕೆಯನ್ನು ದಾಖಲಿಸಿರುತ್ತಾರೆ ಅವರ ಹೇಳಿಕೆ ಏನೆಂದರೆ ಎಂ.ಇ.ಐ4050ರ ಲಾರಿಯ ಆರ್.ಸಿ. ಮಾಲಿಕನಾಗಿರುತ್ತೇನೆ, ನಾನು ಲಾರಿ ಖರೀದಿಸಿದ ಕಾಲಕ್ಕೆ ಶಿವಮೊಗ್ಗದ ಎನ್.ಜಿ.ಆರ್. ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದೆ ನಾನು ನನ್ನ ಲಾರಿಯನ್ನು ಹಿಡಿದ ಜೊತೆಗೆ ಬಸವಾಪಟ್ಟಣಕ್ಕೆ ದಾವಣಗೆರೆಯಿಂದ ಗೊಬ್ಬರ ಹೇರಲು ಪ್ರಕರಣದ ದಿವಸ ಕಳುಹಿಸಿದ್ದೆ ಗೊಬ್ಬರ ಅನ್ ಲೋಡ್ ಮಾಡಿದ ನಂತರ ಬಸವಾಪಟ್ಟಣ ವಾಸಿ ಒಬ್ಬ ಮುಸ್ಲಿಂ, ನಾಗರಾಜ್ ಮತ್ತೊಬ್ಬ ಸೇರಿಕೊಂಡು ಕಟ್ಟಿಗೆ ಹೇರುವುದು ಇದೆ ಅಂತ ತೆಗೆದುಕೊಂಡು ಹೋಗಿದ್ದರು ಕಟ್ಟಿಗೆ ಹೇರಿಕೊಂಡು ಬರುತ್ತಿರುವಾಗ ನಮ್ಮ ಲಾರಿಯನ್ನು ಅರಣ್ಯ ಇಲಾಖೆಯವರು ಹಿಡಿದಿರುತ್ತಾರೆ ಎಂಬ ಅಂಶ ತಿಳಿಯಿತು ಲಾರಿಯಲ್ಲಿ ಉರುವಲು ಕಟ್ಟಿಗೆಯನ್ನು ಹಾಕಿದ ವಿಷಯ ತಿಳಿಯಿತು ವಾಹನ ಬಿಡುಗಡೆ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತೇನೆ ನನಗೆ ನನ್ನ ಲಾರಿಯನ್ನು ಬಿಟ್ಟುಕೊಡಬೇಕಾಗಿ ಕೇಳಿಕೊಳ್ಳುತ್ತೇನೆ. ವಲಯ ಅರಣ್ಯಾಧಿಕಾರಿ ಕಛೇರಿಯಿಂದ ಪಡೆದ ಬಿ ಎಕ್ಸ್ಟ್ರ್ಯಾಕ್ಟ್ ಹಾಜರು ಪಡಿಸಿದ್ದು ಅದನ್ನು ನಿಶಾನೆ ಡಿ1 ಅಂತ ಗುರುತಿಸಲಾಗಿದೆ.

ಅಭಿಯೋಜನಾ ವತಿಯಿಂದ ವಾಹನ ಮಾಲಿಕರಿಗೆ ಪಾಟೀ ಸವಾಲಿಗೆ ಗುರಿ ಪಡಿಸಿದಾಗ ವಾಹನದ ಮಾಲಿಕರು ಪ್ರಕರಣದ ದಿವಸ ನಮ್ಮ ಲಾರಿಗೆ ಚಂದ್ರಪ್ಪ ಅನ್ನುವವನು ಚಾಲಕನಾಗಿದ್ದ ಆ ದಿನ ನನ್ನ ಲಾರಿಯನ್ನು ದಾವಣಗೆರೆಯಿಂದ ಬಸವಾಪಟ್ಟಣಕ್ಕೆ ಗೊಬ್ಬರ ಚೀಲಗಳನ್ನು ಲೋಡ್ ಮಾಡಿ ಕಳುಹಿಸಿದೆ ಬಸವಾಪಟ್ಟಣ 3 ಜನ ವ್ಯಕ್ತಿಗಳು ನನ್ನ ಚಾಲಕನನ್ನು ಕರೆದುಕೊಂಡು ಹೋಗಿ ಉರುವಲು ಕಟ್ಟಿಗೆ ಲೋಡ್ ಮಾಡಿದರು ಅಂತ ತಿಳಿಯಿತು ನಮ್ಮ ಚಾಲಕ ಚಂದ್ರಪ್ಪ ಎಲ್ಲಿ ಇದ್ದಾನೆ ಬದುಕಿದ್ದಾನೆ ಇಲ್ಲವೋ ಗೊತ್ತಿಲ್ಲ ಬಸವಾಪಟ್ಟಣ ನಿವಾಸಿಗಳು ಯಾರು ಅಂತ ನನಗೆ ಖಚಿತವಾಗಿ ಗೊತ್ತಿಲ್ಲ ನಾನು ನನ್ನ ಚಾಲಕನಿಗೆ ಕಟ್ಟಿಗೆ ಹೇರಿಕೊಂಡು ಬರುವಂತೆ ನಾನೇ ಹೇಳಿ ಕಳುಹಿಸಿದ್ದೆ ಅನ್ನುವುದು ಹಾಗೂ ನನಗೆ ಗೊತ್ತಿದ್ದೇ ಕಟ್ಟಿಗೆ ಸಾಗಾಣಿಕೆಯು ಲಾರಿಯಲ್ಲಿ ನಡೆದಿದೆ ಅನ್ನುವುದು ಸರಿಯಲ್ಲ ಎಂದು ತಿಳಿಸಿರುತ್ತಾರೆ.

ಮೇಲ್ಕಂಡ ವಾಹನ ಮಾಲಿಕರ ಹೇಳಿಕೆಗಳನ್ನು ಗಮನಿಸಿದಾಗ ಈ ಕೆಳಕಂಡ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿರುತ್ತದೆ.

1. ಪ್ರಕರಣದಲ್ಲಿ ವಶಪಡಿಸಿಕೊಂಡ ಲಾರಿ ನಂ. ಎಂ.ಇ.ಐ. 4050 ವಾಹನವು ಪ್ರಕರಣ ದಾಖಲಾದ ದಿವಸ ಗೊಬ್ಬರ ತುಂಬಿಕೊಂಡು ದಾವಣಗೆರೆಯಿಂದ ಬಸವಾಪಟ್ಟಣಕ್ಕೆ ಹೋಗಿತ್ತು ಎಂದು ತಿಳಿಸಿದ್ದು ಈ ಬಗ್ಗೆ ಯಾವುದೇ ಅಧಿಕೃತ ದಾಖಲಾತಿಗಳು ಒಪ್ಪಿಸಿರುವುದಿಲ್ಲ.
2. ವಾಹನದ ಮಾಲಿಕರು ಲಾರಿಯನ್ನು ಚಂದ್ರಪ್ಪ ಎಂಬ ಚಾಲಕನ ಸಂಗಡ ಕಳುಹಿಸಿದ್ದಾಗಿ ತಿಳಿಸಿದ್ದು ಸದರಿ ಚಾಲಕನನ್ನು ಸಾಕ್ಷಿಯಾಗಿ ನ್ಯಾಯಾಲಯಕ್ಕೆ ಹಾಜರುಪಡಿಸಲು ವಿಫಲರಾಗಿರುತ್ತಾರೆ ಅವರು ಈಗ ಎಲ್ಲಿದ್ದಾರೆ ಗೊತ್ತಿಲ್ಲ ಎಂದು ಪಾಟೀ ಸವಾಲಿನಲ್ಲಿ ತಿಳಿಸಿರುತ್ತಾರೆ.
3. ಬಸವಾಪಟ್ಟಣದಲ್ಲಿ ಲಾರಿಯನ್ನು ಒಬ್ಬ ಮುಸ್ಲಿಂ, ನಾಗರಾಜ್, ಹಾಗೂ ಇನ್ನೊಬ್ಬ 3 ಜನರು ಕಟ್ಟಿಗೆ ತರಲು ತೆಗೆದುಕೊಂಡು ಹೋದರು ಎಂದು ತಿಳಿಸಿದ್ದು ಪಾಟೀ ಸವಾಲಿನಲ್ಲಿ ಬಸವಾಪಟ್ಟಣದ ವಾಸಿಗಳು ಯಾರು ಎಂದು ಖಚಿತವಾಗಿ ಗೊತ್ತಿಲ್ಲ ಎಂದು ಹೇಳಿರುತ್ತಾರೆ.
4. ಲಾರಿಯ ಚಾಲಕ ಚಂದ್ರಪ್ಪ ಬಸವಾಪಟ್ಟಣ ವಾಸಿ ನಾಗರಾಜ್ ಹಾಗೂ ಇನ್ನಿಬ್ಬರ ಮೇಲೆ ಯಾವುದೇ ದೂರನ್ನು ಪೊಲೀಸ್ ಠಾಣೆಯಲ್ಲಿ ನೀಡಿರುವುದು ಕಂಡು ಬಂದಿರುವುದಿಲ್ಲ.
5. ವಾಹನದ ಮಾಲಿಕರೇ ವಾಹನದಲ್ಲಿ ಕಟ್ಟಿಗೆ ಸಾಗಾಣಿಕೆಯಾಗಿರುವುದನ್ನು ಒಪ್ಪಿಕೊಂಡಿರುತ್ತಾರೆ.

6. ದಿನಾಂಕ: 21.05.88ರಂದು ವಾಹನ ಬಿಡುಗಡೆ ಕೋರಿ ಸಲ್ಲಿಸಿದ ಅರ್ಜಿಯಲ್ಲಿ ವಾಹನ ಚಾಲಕನಿಗೆ ಬಸವಾಪಟ್ಟಣ ವಾಸಿ ಯೋಗೇಶ್ 35 ವರ್ಷ ವಯಸ್ಸಿನ ವ್ಯಕ್ತಿ ಮೋಸಮಾಡಿ ಈ ಕೃತ್ಯ ಎಸಗಿರುತ್ತಾನೆ ಎಂದು ತಿಳಿಸಿದ್ದು ಈ ವಿಚಾರವನ್ನು ಅವರ ಹೇಳಿಕೆಯಲ್ಲಿ ಎಲ್ಲಿಯೂ ಸಹ ತಿಳಿಸಿರುವುದಿಲ್ಲ ಮತ್ತು ಯೋಗೇಶ್ ಎಂಬ ವ್ಯಕ್ತಿಯ ಮೇಲೆ ಸಹ ಪೊಲೀಸ್ ಕಂಪ್ಲೆಂಟ್ ದಾಖಲು ಮಾಡಿರುವುದಿಲ್ಲ.
7. ವಾಹನದ ಮಾಲಿಕರಿಗೆ ಅರಣ್ಯ ಕಾಯಿದೆ 71ಬಿ ಪ್ರಕಾರ ದಿನಾಂಕ: 18.11.88 ಮತ್ತು 20.02.89ರಂದು ಸಮಜಾಯಿಸಿ ಕೇಳಿ ನೋಟೀಸ್ ನೀಡಿದ್ದು ವಾಹನದ ಮಾಲಿಕರು ಇದುವರೆವಿಗೂ ನಾನು ತಪ್ಪಿತಸ್ಥನಲ್ಲ ನನ್ನ ವಾಹನದಲ್ಲಿ ಅಕ್ರಮ ಚಟುವಟಿಕೆ ನಡೆದಿಲ್ಲ ಎಂಬ ಬಗ್ಗೆ ಅಧಿಕೃತ ಸಾಕ್ಷಿದಾರರುಗಳನ್ನು ಹಾಜರು ಪಡಿಸಿರುವುದಿಲ್ಲ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಮತ್ತು ಅರ್ಜಿದಾರರ ಪರ ವಕೀಲರ ವಾದವನ್ನು ಆಲಿಸಿದಾಗ ಅರ್ಜಿದಾರರು ವಾಹನದ ಮಾಲಿಕರು ಅಥವಾ ಪ್ರತಿನಿಧಿಗೆ ಅಥವಾ ಅವರ ಚಾರ್ಜ್ ಪಡೆದವರಿಗೆ (ಚಾಲಕರಿಗೆ) ತಿಳುವಳಿಕೆ ಮತ್ತು ಶಾಮೀಲಾಗಿರದೇ ಅಪರಾಧವಾಗಿದೆ ಎಂಬುದನ್ನು ಡಿಫೆನ್ಸ್‌ರವರು ರುಜುವಾತು ಪಡಿಸಿರುವುದಿಲ್ಲ.

ವಾಹನದ ಮಾಲಿಕರು ಅಗತ್ಯವಾದ ಮತ್ತು ಸಾಧ್ಯವಾಗಬಹುದಾದ ಎಲ್ಲಾ ರೀತಿಯ ಮುಂಜಾಗ್ರತೆ ಕ್ರಮ ತೆಗೆದುಕೊಂಡಿದ್ದರೆ ಈ ಕೃತ್ಯ ನಡೆಯುತ್ತಿರಲಿಲ್ಲ ಅರ್ಜಿದಾರರು ವಾಹನ ಬಿಡುಗಡೆ ಕೋರಿ ಸಲ್ಲಿಸಿದ ಅರ್ಜಿಯಲ್ಲಿರುವ ವಿಷಯ ಮತ್ತು ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಗಳು ಒಂದು ಕಟ್ಟುಕತೆ ನಂಬಲು ಅಸಾಧ್ಯವಾಗಿರುತ್ತದೆ.

ಅರ್ಜಿದಾರರ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲಿಕರು ಅಥವಾ ಅವರ ಪ್ರತಿನಿಧಿಗಳು ಯಾವುದೇ ಮುನ್ನೆಚ್ಚರಿಕೆ ವಹಿಸಿದ ಬಗ್ಗೆ ಸಮರ್ಪಕವಾದ ಸಾಕ್ಷಿಗಳನ್ನು ನೀಡಿರುವುದಿಲ್ಲ ವಾಹನದಲ್ಲಿ ನನ್ನ ಗಮನಕ್ಕೆ ಬಾರದಂತೆ ಈ ಕೃತ್ಯ ನಡೆದಿದೆ ಎಂಬುದನ್ನು ಕರ್ನಾಟಕ ಅರಣ್ಯ ಕಾಯಿದೆ ಕಲಂ 71(ಬಿ) (2)ರ ರೀತ್ಯ ಸಾಬೀತು ಪಡಿಸುವ ಜವಾಬ್ದಾರಿ ವಾಹನದ ಮಾಲಿಕರಿಗೆ ಸೇರಿದ್ದಾಗಿರುತ್ತದೆ. ಅಲ್ಲದೇ ವಾಹನದ ಮಾಲಿಕರ ಏಜಂಟರಾಗಲಿ, ಚಾಲಕನಾಗಲಿ ಅಥವಾ ನಂಬಿಕೆ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮ ಸಾಗಾಣಿಕೆಯಾಗದಂತೆ ಮುನ್ನೆಚ್ಚರಿಕೆ ವಹಿಸುವುದು ಸಹ ಇವರುಗಳ ಜವಾಬ್ದಾರಿಯಾಗಿರುತ್ತದೆ.

"Without prejudice to the provisions of sub-section (1), no order confiscating any tool, rope, chain, boat, vehicle or cattle shall be made under section 71A it the owner of the tool, rope, chain, boat, vehicle or cattle proves to the satisfaction of the authorised officer that it was used in carrying the timber, sandalwood, charcoal, firewood or ivory without the knowledge or connivance of the owner himself, his agent, if any, and the person in charge of the tool, rope, chain, boat, vehicle or cattle and that each of them had taken all reasonable and necessary precautions against such use."

ಲಾರಿ ನಂ.ಎಂ.ಇ.ಐ.4050 ರ ವಾಹನದಲ್ಲಿ ಅರಣ್ಯ ಉತ್ಪನ್ನವು ಕಾನೂನು ಬಾಹಿರವಾಗಿ ಸಾಗಿಸದಂತೆ ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿದ್ದೇವೆ ಎಂಬುದನ್ನು ಸಾಕ್ಷಿ ಪುರಾವೆಗಳ ಸಹಿತ ಈ ಪ್ರಕರಣದಲ್ಲಿ ಸಾಬೀತುಪಡಿಸಲು ವಾಹನದ ಮಾಲಿಕರು ಹಾಗೂ ಅವರ ಪರ ವಕೀಲರು ಸಂಪೂರ್ಣ ವಿಫಲಗೊಂಡಿರುತ್ತಾರಾದ್ದರಿಂದ ಪ್ರಕರಣದ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಹಾಲಿ ಪ್ರಕರಣಕ್ಕೆ ಕೇರಳ ರಾಜ್ಯ ತೀರ್ಮಾನ ಕ್ರೈಮ್ಸ್ 2000 (3) ಪುಟ 563 ಅತ್ಯಂತ ಸರಿ ಹೊಂದುವಂತಹ ತೀರ್ಮಾನವಾಗಿರುತ್ತದೆ ಅದರ ಉದ್ಧೃತ ಭಾಗ ಈ ಕೆಳಕಂಡಂತಿದೆ.

"The contention that such a strict view would adversely affect an innocent vehicle owner cannot be countenanced since any narrow or liberal interpretation of confiscatory provisions in the Act can eventually lead to disastrous consequences for forest wealth which is a very endangered bounty of nature. The idea behind extension of confiscatory provisions to vehicles etc., is to convey a pre-emptory and explicit message to the vehicle owners not to allow their vehicles to be used for depletion of forest wealth. If any vehicle is caught in the nefarious act of carrying illicit forest produce, it is not enough that the owner establishes his innocence alone. If he wants to retrieve his vehicle he must show further that the person who was in-charge of the vehicle has taken reasonable and necessary precautionary measures against such user of the vehicle. The owner cannot rest with establishing his innocence in the matter. It may be that having succeeded in showing his innocence his failure to establish the next limb might lead to hard consequences to him. Legislature intended, by providing such stringent conditions, to prevent harder consequences for the society and for the posterity."

ಮೇಲ್ಕಂಡ ವಿದ್ಯಮಾನಗಳನ್ನು ಅವಲೋಕಿಸಿ ನೋಡಿದಾಗ ಅರ್ಜಿದಾರರ ತಿಳುವಳಿಕೆಗೆ ಬಂದು ಈ ಕೃತ್ಯ ನಡೆದಿದೆ ಹಾಗೇ ಅರ್ಜಿದಾರರು ಅಥವಾ ಅವರು ನೇಮಿಸಿದಂತ ವ್ಯಕ್ತಿಗಳು ಸಹ ಮೇಲ್ಕಂಡ ಅರಣ್ಯ ಉತ್ಪನ್ನ ಕಳ್ಳಸಾಗಾಣಿಕೆಯಲ್ಲಿ ಭಾಗವಹಿಸಿರುತ್ತಾರೆ ಎಂಬುದಕ್ಕೆ ಯಾವುದೇ ಸಂಶಯವಿರುವುದಿಲ್ಲ ಹಾಗೂ ಈ ವಾಹನವನ್ನು ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲಿಕರು ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುವುದಿಲ್ಲ ಆದ್ದರಿಂದ ಅಂಶ 2ನ್ನು ಇಲ್ಲ ಎಂದು ಉತ್ತರಿಸಲಾಗಿದೆ.

**ಅಂತಿಮ ಆದೇಶ**

ಈ ಮೇಲ್ಕಂಡ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲಾತಿಗಳನ್ನು ಪರಿಶೀಲಿಸಿ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ ಸೀಮಾಗರ್ಗ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) (2)ನೇ ತಿದ್ದುಪಡಿ ಪ್ರಕಾರ ಲಾರಿ ನಂ. ಎಂ.ಇ.ಐ. 4050 (ಛಾಸೀಸ್ ನಂ. 344073702206, ಇಂಜಿನ್ ನಂ. 692ಡಿ01702688 ಕಾಡು ಜಾತಿ ಸೌದೆ 13.5 ಘ.ಮೀ. ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ ಹಾಗೂ ಕಾಡುಜಾತಿ ಸೌದೆಯನ್ನು ಇಲಾಖಾ ಕಾನೂನು ಪ್ರಕಾರ ವಿಲೇ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳಲು ಆದೇಶಿಸಿದೆ ಸದರಿ ವಾಹನವು ಎಲ್ಲಾ ಋಣಭಾರಗಳಿಂದ ಮುಕ್ತವಾಗಿದೆ.

ಈ ಆದೇಶವನ್ನು ದಿನಾಂಕ: 08.12.2004 ರಂದು ತೆರೆದ ನ್ಯಾಯಾಲಯದಲ್ಲಿ ಉಚ್ಚರಿಸಲಾಗಿದೆ ಈ ಆದೇಶವು ದಿನಾಂಕ: 08.12.2004 ರಿಂದ 30 ದಿವಸಗಳ ಒಳಗೆ ವಾಹನದ ಮಾಲಿಕರು ಮೇಲ್ಮನವಿ ಸಲ್ಲಿಸದೇ ಇದ್ದರೆ ಅದೇ ಅಂತಿಮ ಆದೇಶವಾಗಿರುತ್ತದೆ.

ಸೀಮಾ ಗರ್ಗ್

ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ.

**ಅನುಬಂಧ**

**2. ಫಿರ್ಯಾದಿದಾರರ ಪರ ಸಾಕ್ಷಿಗಳ ವಿಚಾರಣೆ**

3. ಶ್ರೀ ಜೆ.ಬಿ. ನಾಯಕ್ ವಲಯ ಅರಣ್ಯಾಧಿಕಾರಿ ದೇವನಹಳ್ಳಿ ಪಿಡಬ್ಲ್ಯೂ-1

4. ಶ್ರೀ ನೀಲಯ್ಯ ವಲಯ ಅರಣ್ಯಾಧಿಕಾರಿ ವೇಣೂರು ಪಿಡಬ್ಲ್ಯೂ-2

**ಫಿರ್ಯಾದಿದಾರರ ಪರ ದಾಖಲಾತಿಗಳ ಪರಿಶೀಲನೆ**

4. ಸ್ಥಳ ಮಹಜರ್ ನಿಶಾನೆ ಪಿ1

5. ವಲಯ ಅರಣ್ಯಾಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಸಮಕ್ಷಮ ವಾಹನದ ಹಾಗೂ ಅರಣ್ಯ ಉತ್ಪನ್ನ ಹಾಜರುಪಡಿಸಿದ ಬಗ್ಗೆ ವರದಿ ನಿಶಾನೆ ಪಿ2.

6. ಪಿಡಬ್ಲ್ಯೂ-1 ಸಾಕ್ಷಿದಾರರ ಸಹಿ ನಿಶಾನೆ 1ಎ

7. ಪಿಡಬ್ಲ್ಯೂ-21 ಸಾಕ್ಷಿದಾರರ ಸಹಿ ನಿಶಾನೆ ಪಿ1 ಬಿ

8. ನಿಶಾನೆ ಪಿ2ಎ ಪಿಡಬ್ಲ್ಯೂ 1 ಫಿರ್ಯಾದಿದಾರರ ಸಹಿ

9. ನಿಶಾನೆ ಪಿ3 ಪ್ರಥಮ ಮಾಹಿತಿ ವರ್ತಮಾನದ ವರದಿ

10. ನಿಶಾನೆ ಪಿ3ಎ ಫಿರ್ಯಾದಿದಾರರ ಸಹಿ

11. ನಿಶಾನೆ ಪಿ4 ಸೀಜರ್ ರಿಪೋರ್ಟ್

12. ನಿಶಾನೆ ಪಿ4ಎ ಫಿರ್ಯಾದಿದಾರರ ಸಹಿ

13. ಎಕ್ಸಿಬಿಟ್1 ಅರ್ಜಿದಾರರ ಅರ್ಜಿ ದಿನಾಂಕ: 21.05.88.

14. ಎಕ್ಸಿಬಿಟ್ 2 ಅರಣ್ಯ ಕಾಯಿದೆ 1963 ಸೆಕ್ಷನ್ 71 (ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರಗಳು ದಿನಾಂಕ: 18.11.88 ಹಾಗೂ 20.02.1989.

15. ಎಕ್ಸ್ ಬಿಟ್ 3 ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಭದ್ರಾವತಿ ನ್ಯಾಯಾಲಯದ ದಿನಾಂಕ: 24.02.1990ರ ಆದೇಶ.

**2. ಅರ್ಜಿದಾರರ ಪರ ದಾಖಲಾತಿಗಳ ಪರಿಶೀಲನೆ**

ನಿಶಾನೆ ಡಿ1 ಲಾರಿ ಎಂ.ಇ.ಐ. 4050 ವಾಹನದ ಬಿ ರಿಜಿಸ್ಟರ್ ಎಕ್ಸ್‌ಟ್ರ್ಯಾಕ್ಟ್.

ಸೀಮಾ ಗರ್ಗ್

ಪಿ.ಆರ್. 1762

ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ.

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ಭದ್ರಾವತಿ**

**ಸಂಖ್ಯೆ: ಎಫ್‌ಓಸಿ.ಸಿಓಎಸ್.ಸಿಆರ್ 20/92-93, ದಿನಾಂಕ: 1ನೇ ಡಿಸೆಂಬರ್, 2004**

**ನಿರೂಪಣಾಧಿಕಾರಿ :** ಶ್ರೀಮತಿ ಸೀಮಾಗರ್ಗ್ ಭಾಅಸೇ
ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

**ಅರ್ಜಿದಾರರು :** ಮೆ. ಇಂಟಿಗ್ರೇಟೆಡ್ ಫೈನಾನ್ಸ್ ಕಂಪನಿ ಲಿ.,
ಎಂಪೈರ್ ಇನ್‌ಫ್ಯಾಂಟ್ರಿ 11ನೇ ಫ್ಲೋರ್ 29, ಇನ್‌ಫ್ಯಾಂಟ್ರಿ ರೋಡ್,
ಬೆಂಗಳೂರು-560 001.

**ಪ್ರಕರಣದ ಹಿನ್ನೆಲೆ:**

ದಿನಾಂಕ: 16.02.93 ರಂದು ವನಪಾಲಕ, ನಗರ ತನಿಖಾ ಕಾರ್ಯ, ಭದ್ರಾವತಿ ಹಾಗೂ ಅವರ ಸಿಬ್ಬಂದಿಯವರು ಖಚಿತ ವರ್ತಮಾನದ ಮೇರೆಗೆ ಬೈಪಾಸ್ ರಸ್ತೆ ಮಿಲ್ಟ್ರಿಕ್ಯಾಂಪ್ ಸಮೀಪ ಭದ್ರಾವತಿಯಲ್ಲಿ ಅಕ್ರಮವಾಗಿ ಶ್ರೀಗಂಧ ತುಂಡುಗಳು ಸಾಗಾಣಿಕೆಯಾಗುತ್ತಿದ್ದ ಮಾರುತಿ ವ್ಯಾನು ಸಂಖ್ಯೆ: ಕೆಎ-01-ಎಂ-1401 ನ್ನು ಅದರಲ್ಲಿದ್ದ 95 ಶ್ರೀಗಂಧದ ತುಂಡುಗಳನ್ನು ವಶಪಡಿಸಿಕೊಂಡು ಸ್ಥಳದಲ್ಲಿಯೇ ಪಂಚನಾಮೆ ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ: 138/92-93 ನ್ನು ದಾಖಲು ಮಾಡಿ ಸದರಿ ವಾಹನವನ್ನು ಹಾಗೂ ಅಮಾನತ್ತುಪಡಿಸಿದ 95 ಶ್ರೀಗಂಧದ ತುಂಡುಗಳನ್ನು ಅರಣ್ಯ ಕಾಯಿದೆ 71ಎ ಪ್ರಕಾರ ಕ್ರಮ ಜರುಗಿಸಲು ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ಇವರ ನ್ಯಾಯಾಲಯಕ್ಕೆ ಮುಂದಿನ ಕ್ರಮಕ್ಕಾಗಿ ಒಪ್ಪಿಸಿರುತ್ತಾರೆ.

ಈ ಮೊಕದ್ದಮೆಗೆ ಸಂಬಂಧಿಸಿದ ವಾಹನವನ್ನು ಹಾಗೂ ಸರ್ಕಾರದ ಪರ ಅಮಾನತ್ತುಪಡಿಸಿದ ಶ್ರೀಗಂಧದ ತುಂಡುಗಳನ್ನು ವಲಯ ಅರಣ್ಯಾಧಿಕಾರಿಗಳು, ಸರ್ಕಾರಿ ಶ್ರೀಗಂಧ ಮತ್ತು ನಾಟಾ ಉಗ್ರಾಣ, ತರೀಕೆರೆರವರಿಗೆ ದಿನಾಂಕ: 24.02.93 ರಂದು ವಹಿಸಿಕೊಟ್ಟಿರುತ್ತದೆ.

ಸದರಿ ಪ್ರಕರಣದಲ್ಲಿ ಅರ್ಜಿದಾರ ವ್ಯವಸ್ಥಾಪಕ ನಿರ್ದೇಶಕರು, ಮೆ. ಇಂಟಿಗ್ರೇಟೆಡ್ ಫೈನಾನ್ಸ್ ಕಂಪನಿ ಲಿ., ಬೆಂಗಳೂರು ರವರು ವಕೀಲರ ಮುಖಾಂತರ ದಿನಾಂಕ: 30.04.93 ರಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ದಿನಾಂಕ: 09.11.92ರ ಬಾಡಿಗೆ ಕರಾರು ಒಪ್ಪಂದದ ಪ್ರಕಾರ ಮೇಲ್ಕಂಡ ವಾಹನವನ್ನು ಶ್ರೀ ಕೆ. ಮಂಜುನಾಥ, ಬೆಂಗಳೂರು ಇವರಿಗೆ ಬಾಡಿಗೆ ಆಧಾರದ ಮೇಲೆ ನೀಡಿರುವುದಾಗಿ ಅವರು ಪ್ರತಿ ತಿಂಗಳು ಬಾಡಿಗೆ ರೂ. 4526-00ನ್ನು ಪಾವತಿಸಲು ಒಡಂಬಡಿಕೆಯಾಗಿದ್ದು ಒಟ್ಟು ರೂ. 16005-00ನ್ನು ದಿನಾಂಕ: 09.11.1992 ರಿಂದ 01.10.95ರ ಅವಧಿಯಲ್ಲಿ

ಪಾವತಿಸಿದ್ದು, ಬಾಕಿ ಹಣ ಪಾವತಿಸಿದ ನಂತರ ಅವರು ಮೇಲ್ಕಂಡ ವಾಹನದ ಮಾಲಿಕರಿರುತ್ತಾರೆ ಪ್ರಸ್ತುತ ಅರ್ಜಿದಾರರು ಫೈನಾನ್ಸ್ ಕಂಪನಿ: ವಾಹನ ಮಾಲಿಕರೆಂದು ಸದರಿ ವಾಹನವನ್ನು ಅರ್ಜಿದಾರರು ತಾತ್ಕಾಲಿಕ ವಶಕ್ಕೆ ಬಿಡುಗಡೆ ಮಾಡಲು ಕೋರಿರುತ್ತಾರೆ.

ಸಹಾಯಕ ಸರ್ಕಾರಿ ಅಭಿಯೋಜಕರು, ಭದ್ರಾವತಿ ಇವರು ದಿನಾಂಕ: 07.08.93ರ ಆಕ್ಷೇಪಣೆ ವರದಿಯಲ್ಲಿ ನಿಜವಾದ ವಾಹನ ಮಾಲಿಕರು (ಆರ್.ಸಿ. ಓನರ್) ವಾಹನ ಮಾಲಿಕತ್ವದ ಬಗ್ಗೆ ಅರ್ಜಿ ಸಲ್ಲಿಸಿರುವುದಿಲ್ಲವೆಂದು, ಮೇಲ್ಕಾಣಿಸಿದ ವಾಹನವನ್ನು ಅರಣ್ಯ ಕಾಯಿದೆ ಬಾಹಿರವಾಗಿ ಶ್ರೀಗಂಧದ ತುಂಡುಗಳನ್ನು ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ದೃಢಪಟ್ಟಿರುವುದಾಗಿ ನಿಜವಾದ ವಾಹನ ಮಾಲಿಕ ವಾಹನ ಮಾಲಿಕತ್ವದ ಬಗ್ಗೆ ಅರ್ಜಿ ಸಲ್ಲಿಸದೆ ಇರುವುದನ್ನು ನೋಡಿದರೆ ಅವರು ನೇರವಾಗಿ ಈ ಅಪರಾಧ ಪ್ರಕರಣದಲ್ಲಿ ಭಾಗಿಯಾಗಿರುವುದು ಕಂಡು ಬಂದಿರುತ್ತದೆ.

ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಭದ್ರಾವತಿಯವರು ದಿನಾಂಕ: 19.11.93ರ ಪತ್ರದಲ್ಲಿ ಮಾರುತಿ ವ್ಯಾನು ವಾಹನ ಸಂಖ್ಯೆ: ಕೆಎ-01-ಎಂ-1401ರ ಹೈರ್ ಪರ್ಚೇಸ್ ಕರಾರು (ಪತ್ರದ ದಿನಾಂಕ: 09.11.92) ಒಪ್ಪಂದದಂತೆ ಮೆ. ಇಂಟಿಗ್ರೇಟೆಡ್ ಫೈನಾನ್ಸ್ ಕಂಪನಿಯವರು ಮೊದಲನೇ ಪಾರ್ಟಿ ಆಗಿ ಶ್ರೀ ಮಂಜುನಾಥ ಇವರು ಎರಡನೆಯ ಪಾರ್ಟಿ ಆಗಿ ಮತ್ತು ಶ್ರೀ ಎಂ ಕೃಷ್ಣಪ್ಪ ಇವರು ಗ್ಯಾರೆಂಟರ್ ಎಂದು, ಎರಡನೇ ಪಾರ್ಟಿ ಶ್ರೀ ಕೆ. ಮಂಜುನಾಥ ಬಾಡಿಗೆದಾರರವರು ತಿಂಗಳ ಬಾಡಿಗೆ ಕಂತು ಹಣವನ್ನು ತಪ್ಪದೆ ಕಟ್ಟಬೇಕಾಗಿರುತ್ತದೆ ಎಂದು ಸದರಿ ಕರಾರು ಒಪ್ಪಂದದ ಪ್ರಕಾರ ಮೆ. ಇಂಟಗ್ರೇಟೆಡ್ ಫೈನಾನ್ಸ್ ಕಂಪನಿ. ಲಿ., ಬೆಂಗಳೂರುರವರು ಹೈರ್ ಪರ್ಚೇಸ್ ಒಪ್ಪಂದದ ಪ್ರಕಾರ ಕಾನೂನು ಬದ್ಧವಾಗಿ ವಾಹನ ಮಾಲಿಕರೆಂದು ಆರ್.ಸಿ. ಮಾಲಿಕರಲ್ಲವೆಂದು ಅಧಿಕಾರಿಯುತ ಅಧಿಕಾರಿಗಳು ವಾಹನವನ್ನು ತಾತ್ಕಾಲಿಕ ವಶಕ್ಕೆ ಬಿಡುಗಡೆ ಮಾಡುವ ಸಂದರ್ಭದಲ್ಲಿ ಸದರಿ ಮೆ. ಇಂಟೀಗ್ರೇಟೆಡ್ ಫೈನಾನ್ಸ್ ಕಂಪನಿಯವರಿಗೆ ಬಿಡಬಹುದೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಸದರಿ ಅರ್ಜಿದಾರರ ಮಧ್ಯಂತರ ಅರ್ಜಿಯ ಬಗ್ಗೆ ಅಧಿಕಾರಿಯುತ ಅಧಿಕಾರಿಗಳ ನ್ಯಾಯಾಲಯದಲ್ಲಿ ದಿನಾಂಕ: 07.08.93, 21.08.93 ಮತ್ತು 24.08.96 ರಲ್ಲಿ ಎರಡು ಕಡೆ ವಕೀಲರ ವಾದಗಳನ್ನು ವಿಚಾರ ಮಾಡಿರುತ್ತದೆ. ದಿನಾಂಕ: 08.07.94 ಮತ್ತು 24.08.96ರಂದು ಅರ್ಜಿದಾರರ ಪರ ವಕೀಲರು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಉಚ್ಛ ನ್ಯಾಯಾಲಯ ಬೆಂಗಳೂರು ಸಿವಿಲ್ ಆರ್.ಪಿ. ಸಂಖ್ಯೆ: 783/80 ಮತ್ತು ಆರ್.ಪಿ. ಸಂಖ್ಯೆ 20985/ 79 ರಲ್ಲಿ ನೀಡಿದ ತೀರ್ಪಿನಂತೆ ಮೇಲ್ಕಂಡ ವಾಹನವನ್ನು ಅರ್ಜಿದಾರರ ತಾತ್ಕಾಲಿಕ ವಶಕ್ಕೆ ಬಿಡುಗಡೆ ಮಾಡಲು ಹಾಗೂ ಈಗಾಗಲೇ ಸಲ್ಲಿಸಿರುವ ಐಎ-1 ಮಧ್ಯಂತರ ಅರ್ಜಿಯನ್ನು ತೀರ್ಮಾನಿಸಲು ಕೋರಿರುತ್ತಾರೆ.

ಹೈರ್ ಪರ್ಚೇಸ್ ಅಗ್ರಿಮೆಂಟ್ ನಿಯಮ 2(ಡಿ) ಪ್ರಕಾರ ಬಾಡಿಗೆದಾರ ವಾಹನವನ್ನು ರಾಜ್ಯ ಅಥವಾ ಕೇಂದ್ರ ಶಾಸನಕ್ಕೆ ಸಂಬಂಧಿಸಿದ ಅರಣ್ಯ ಹಾಗೂ ಇತರೆ ಇಲಾಖೆಯ ನಿರ್ಬಂಧಿತ ಸರಕುಗಳನ್ನು ಸಾಗಾಣಿಕೆ ಮಾಡಬಾರದೆಂದು ಕಾನೂನು ಬಾಹಿರ ಉದ್ದೇಶಕ್ಕಾಗಿ ವಾಹನವನ್ನು ಉಪಯೋಗಿಸಬಾರದೆಂಬ ಷರತ್ತಿಗೆ ಒಳಪಟ್ಟಿರುತ್ತಾರೆ. ಈ ಷರತ್ತಿಗೆ ವಿರುದ್ಧವಾಗಿ ಅವರು ವಾಹನವನ್ನು ಶ್ರೀಗಂಧದ ಅಕ್ರಮ ಸಾಗಾಣಿಕೆಯಲ್ಲಿ ತೊಡಗಿಸಿರುತ್ತಾರೆ. ಬಾಡಿಗೆದಾರರು (ಆರ್.ಸಿ. ಓನರ್) ಮೇಲ್ಕಂಡಂತೆ ಅರಣ್ಯ ಮೊಕದ್ದಮೆಗೆ ಒಳಪಟ್ಟಿರುವ ವಾಹನದ ಮೇಲಿನ ಹಕ್ಕಿನ ಬಗ್ಗೆ ಯಾವುದೇ ಅರ್ಜಿ ಸಲ್ಲಿಸಿರುವುದಿಲ್ಲ ಇದರಿಂದ ಆರ್‌ಸಿ ಓನರ್ (ಬಾಡಿಗೆದಾರ) ಇವರಿಗೆ ವಾಹನದ ಮೇಲೆ ಯಾವುದೇ ಆಸಕ್ತಿಯಿಲ್ಲದಿರುವುದು ಹಾಗೂ ಅವರು ನೇರವಾಗಿ ಈ ಅಪರಾಧದಲ್ಲಿ ಭಾಗಿಯಾಗಿರುವುದು ಮೇಲುನೋಟಕ್ಕೆ ದೃಢಪಟ್ಟಿರುತ್ತದೆ.

ಮೇಲ್ಕಂಡ ವಾಹನವನ್ನು ಅರಣ್ಯ ಕಾಯ್ದೆ ಬಾಹಿರ ಸರಕುಗಳನ್ನು ಅರ್ಜಿದಾರ/ ಫೈನಾನ್ಸಿಯರ್ಸ್‌ರವರು ಸಾಗಾಣಿಕೆಯಾಗದಂತೆ ಯಾವುದೇ ಮುನ್ನೆಚ್ಚರಿಕೆ ಕ್ರಮ ಕೈಗೊಂಡಿರುವುದಿಲ್ಲ ಹಾಗೂ ಅವರು ಬಾಡಿಗೆದಾರರ (ಆರ್‌ಸಿ ಓನರ್) ಮೇಲೆ ಯಾವ ನಿಯಂತ್ರಣವಿಲ್ಲದಿರುವುದು ಕಂಡು ಬಂದಿರುತ್ತದೆ. ಒಂದು ವೇಳೆ ವಾಹನವನ್ನು ಫೈನಾನ್ಸ್ ರವರಿಗೆ ತಾತ್ಕಾಲಿಕವಾಗಿ ಬಿಡುಗಡೆ ಮಾಡಿದಲ್ಲಿ ಪುನಃ ಸದರಿ ವಾಹನವನ್ನು ದುರುಪಯೋಗಪಡಿಸಿಕೊಳ್ಳುವ ಸಂಭವವಿರುತ್ತದೆ ಎಂದು ತೀರ್ಮಾನಿಸಿ ಮೆ. ಇಂಟಿಗ್ರೇಟೆಡ್ ಫೈನಾನ್ಸ್ ಕಂಪನಿ. ಲಿ., ಬೆಂಗಳೂರು ಇವರು ಮಾರುತಿ ವ್ಯಾನು ಸಂಖ್ಯೆ: ಕೆಎ-01-ಎಂ-1401 ತಾತ್ಕಾಲಿಕ ವಶಕ್ಕೆ ಬಿಡುಗಡೆ ಮಾಡಲು ಸಲ್ಲಿಸಿರುವ ದಿನಾಂಕ: 30.04.93 ಅರ್ಜಿಯನ್ನು ದಿನಾಂಕ: 16.09.94 ರಂದು ತಿರಸ್ಕರಿಸಿ ಆದೇಶ ಹೊರಡಿಸಲಾಗಿದೆ.

ಅರ್ಜಿದಾರರು ಈ ನ್ಯಾಯಾಲಯದ ದಿನಾಂಕ: 16.09.94ರ ಆದೇಶದ ವಿರುದ್ಧ ಶಿವಮೊಗ್ಗ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಕ್ರಿಮಿನಲ್ ಮಿಸ್ ಅಪೀಲ್ ನಂ.5/95ರಲ್ಲಿ ಮೇಲ್ಮನವಿ ಸಲ್ಲಿಸಿರುತ್ತಾರೆ. ಮಾನ್ಯ ನ್ಯಾಯಾಲಯವು ಅರ್ಜಿದಾರರ ಅರ್ಜಿಯನ್ನು ವಜಾ ಮಾಡಿ ಕಾನೂನು ಪ್ರಕಾರ ಸೂಕ್ತ ಆದೇಶ ಹೊರಡಿಸಲು ಪ್ರಕರಣದ ಕಡತವನ್ನು ಈ ನ್ಯಾಯಾಲಯಕ್ಕೆ ವಾಪಸ್ಸು ಕಳುಹಿಸುವಂತೆ ಸೂಚಿಸಿ ದಿನಾಂಕ: 10.05.96ರಂದು ಆದೇಶ ಹೊರಡಿಸಿರುತ್ತಾರೆ.

ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಆದೇಶ ಕ್ರಿಮಿನಲ್ ಮಿಸ್ ಅಪೀಲು ಸಂಖ್ಯೆ: 5/95 ದಿನಾಂಕ: 10.05.96ರ ಆದೇಶದಂತೆ ಈ ನ್ಯಾಯಾಲಯದಲ್ಲಿ ದಿನಾಂಕ: 31.08.96ರಂದು ಅರ್ಜಿದಾರರ ವಾಹನದ ತಾತ್ಕಾಲಿಕ ಬಿಡುಗಡೆ ಕೋರಿಕೆಯ ಅರ್ಜಿಯನ್ನು ತಿರಸ್ಕರಿಸಿ ಆದೇಶ ಹೊರಡಿಸಿರುತ್ತದೆ.

ಅರ್ಜಿದಾರರು ಈ ನ್ಯಾಯಾಲಯದ ದಿನಾಂಕ: 31.08.98ರ ಆದೇಶದ ವಿರುದ್ಧ ಮಾನ್ಯ ಶಿವಮೊಗ್ಗ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿರುತ್ತಾರೆ. ಮಾನ್ಯ ನ್ಯಾಯಾಲಯವು ಈ ನ್ಯಾಯಾಲಯದ ಆದೇಶವನ್ನು ಬದಿಗೊತ್ತಿ ಕೆಲವೊಂದು ಷರತ್ತುಗಳನ್ನು ಹೊರಡಿಸಿ ವಾಹನವನ್ನು ಅರ್ಜಿದಾರರಿಗೆ ತಾತ್ಕಾಲಿಕ ಬಿಡುಗಡೆ ಮಾಡಲು ಕ್ರಿ.ಮಿ.ಅ. ಸಂಖ್ಯೆ: 61/96 ದಿನಾಂಕ: 09.07.97ರಂದು ಆದೇಶ ಹೊರಡಿಸಿರುತ್ತದೆ.

ಅರ್ಜಿದಾರರಿಗೆ ದಿನಾಂಕ: 15.10.97 ಮತ್ತು 19.02.99ರಂದು ಪತ್ರ ಬರೆದು ಮಾನ್ಯ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯದ ಆದೇಶದಂತೆ ಷರತ್ತುಗಳನ್ನು ಪೂರೈಸಿ ವಾಹನವನ್ನು ವಶಕ್ಕೆ ಪಡೆಯಲು ತಿಳಿಸಿರುತ್ತದೆ. ವಾಹನದ ಮಾಲಿಕರು ನ್ಯಾಯಾಲಯದ ಷರತ್ತುಗಳನ್ನು ಪೂರೈಸಿ ವಾಹನವನ್ನು ವಶಕ್ಕೆ ಪಡೆದಿರುವುದಿಲ್ಲ.

ಈ ಪ್ರಕರಣದ ಬಗ್ಗೆ ಅಂತಿಮ ಆದೇಶ ಹೊರಡಿಸಲು ದಿನಾಂಕ: 04.12.2003 ರಿಂದ 07.04.2004ರ ವರೆಗೆ ವಿವಿಧ ದಿನಾಂಕಗಳಂದು ನಿಗದಿಪಡಿಸಿ ಈ ನ್ಯಾಯಾಲಯದಲ್ಲಿ ವಿಚಾರಣೆ ನಡೆಸಿರುತ್ತದೆ. ಅಭಿಯೋಜನಾ ವತಿಯಿಂದ ಶ್ರೀ ಚಂದ್ರಮೌಳಿ ಬಿನ್ ಚಂದ್ರ ಶೇಖರ್ ಜಟ್ಟಿ ಪ್ರಥಮ ದರ್ಜೆ ಸಹಾಯಕ ಸಿರಿಗೆರೆ ವಲಯ ಇವರು ಪಿಡಬ್ಲ್ಯೂ-1 ಸಾಕ್ಷಿದಾರರಾಗಿ ಹೇಳಿಕೆ ನೀಡಿರುತ್ತಾರೆ. ಪ್ರತಿವಾದಿಗಳ ಪರವಾಗಿ ಅರ್ಜಿದಾರರು ಹಾಗೂ ಅವರ ಪರ ವಕೀಲರು ದಿನಾಂಕ: 04.12.02 ರಂದು ಮಾನ್ಯ ನ್ಯಾಯಾಲಯಕ್ಕೆ ಹಾಜರಾಗಿರುತ್ತಾರೆ. ಸದರಿ ದಿನಾಂಕದಂದು ಅರ್ಜಿದಾರರು ಮತ್ತು ಅವರ ಪರ ವಕೀಲರು ನ್ಯಾಯಾಲಯಕ್ಕೆ ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿರುವುದಿಲ್ಲ.

ಈ ಮೇಲ್ಕಂಡ ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಂಡ ವಾಹನದ ಬಗ್ಗೆ ಅಂತಿಮ ಆದೇಶ ಹೊರಡಿಸಲು ಈ ಕೆಳಕಂಡ ಅಂಶಗಳನ್ನು ಪರಿಶೀಲಿಸುವುದು ಅವಶ್ಯವಾಗಿದೆ.

**ಅಂಶ-1**

ವಾಹನ ಮಾರುತಿ ವ್ಯಾನು ನಂ. ಕೆಎ-01-ಎಂ-1401 ನ್ನು ದಿನಾಂಕ: 16.02.93 ರಂದು 95 ಶ್ರೀಗಂಧದ ತುಂಡುಗಳ ಕಳ್ಳ ಸಾಗಾಣಿಕೆಯ ಸಂಬಂಧ ಅಮಾನತ್ತುಪಡಿಸಿರುವುದಾಗಿ ಹಾಗೂ ಇದರಿಂದ ಅರಣ್ಯ ಅಪರಾಧ ಪ್ರಕರಣ ದಾಖಲಾಗಿದೆಯೇ.

**ಅಂಶ-2**

ಅಂಶ-1 ರುಜುವಾತು ಆದಲ್ಲಿ ಸದರಿ ಅಪರಾಧವು ವಾಹನದ ಮಾಲಿಕರಿಗೆ ಅಥವಾ ಅವರ ಪ್ರತಿನಿಧಿಗೆ ಅಥವಾ ಅವರ ಚಾರ್ಜು ಪಡೆದವರಿಗೆ (ಚಾಲಕರಿಗೆ) ತಿಳುವಳಿಕೆ ಮತ್ತು ಶಾಮೀಲಾಗಿರದೇ ಅಪರಾಧವಾಗಿದೆ ಎಂಬುದನ್ನು ಡಿಫೆನ್ಸ್ ರವರು ರುಜುವಾತು ಪಡಿಸಿರುವರೇ ಹಾಗೂ ಅವರೆಲ್ಲರೂ ಅಗತ್ಯವಾದ ಮತ್ತು ಸಾಧ್ಯವಾಗಬಹುದಾದ ಎಲ್ಲಾ ರೀತಿಯ ಮುಂಜಾಗ್ರತಾ ಕ್ರಮ ಕೈಗೊಂಡಿರುವರೇ ಎಂದು ರುಜುವಾತು ಪಡಿಸಿರುತ್ತಾರೆಯೇ.

**ಅಂಶ-3**

**ಆದೇಶ**

**ಅಂಶ-1 ಕಾರಣಗಳು**

ದಿನಾಂಕ:16.02.93 ರಂದು ವನಪಾಲಕ ನಗರ ತನಿಖಾ ಕಾರ್ಯ ಭದ್ರಾವತಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಸಿಬ್ಬಂದಿಯವರು ಖಚಿತ ವರ್ತಮಾನದ ಮೇರೆಗೆ ಭದ್ರಾವತಿ ಮಿಲ್ಟ್ರಿ ಕ್ಯಾಂಪ್ ಹತ್ತಿರ ಬೈಪಾಸ್ ರಸ್ತೆಯಲ್ಲಿ ಹೋಗುತ್ತಿರುವಾಗ ಚೆಕಿಂಗ್‌ಗೇಟ್ ತರೀಕೆರೆಯಿಂದ ನೀಡಿದಂತಹ ವರ್ತಮಾನದ ಸುಳಿವಿನ ವಾಹನವು ತರೀಕೆರೆ ಕಡೆಯಿಂದ ಎದುರುಗಡೆ ಬರುತ್ತಿದ್ದು ಅದನ್ನು ನಿಲ್ಲಿಸಲು ಸೂಚನೆ ನೀಡಿದಾಗ್ಯೂ ವಾಹನವನ್ನು ನಿಲ್ಲಿಸದೆ ವೇಗವಾಗಿ ಓಡಿಸಲು ಶುರುಮಾಡಿದಾಗ ಇಲಾಖಾ ವಾಹನದಲ್ಲಿ ಬೆನ್ನತ್ತಿದಾಗ ವಾಹನವನ್ನು ಅಲ್ಲಿಯೇ ಬಿಟ್ಟು ಅದರಲ್ಲಿದ್ದ ಅಪರಾಧಿಗಳು ಓಡಿ ಪರಾರಿಯಾಗಿರುತ್ತಾರೆ.

ವಾಹನವನ್ನು ಸ್ಥಳದಲ್ಲಿ ತಪಾಸಣೆ ಮಾಡಿದಾಗ ವಾಹನದ ಸಂಖ್ಯೆ: ಕೆಎ-01-ಎಂ-1401 ಮಾರುತಿ ವ್ಯಾನು ಆಗಿದ್ದು ವಾಹನದ ಒಳಗಡೆ ಭಾಗದಲ್ಲಿ ಶ್ರೀಗಂಧದ ತುಂಡುಗಳು ತುಂಬಿರುವುದು ಕಂಡುಬಂದಿತು. ಸದರಿ ಶ್ರೀಗಂಧದ ತುಂಡುಗಳನ್ನು ವಾಹನದಿಂದ ಕೆಳಗಿಳಿಸಿ ಪರಿಶೀಲಿಸಿದಾಗ ಸದರಿ ಶ್ರೀಗಂಧದ ತುಂಡುಗಳಿಗೆ ಯಾವುದೇ ಇಲಾಖಾ ಛಾಪಾ ಗುರುತು ಕಂಡು ಬಂದಿರುವುದಿಲ್ಲ ಆದ್ದರಿಂದ ಸದರಿ ಶ್ರೀಗಂಧದ ತುಂಡುಗಳ ಸಾಗಾಣಿಕೆಯು ಅಕ್ರಮ ಎಂದು ಭಾವಿಸಿ ಅವುಗಳನ್ನು ಅಮಾನತ್ತು ಪಡಿಸಿರುತ್ತಾರೆ ನಂತರ ಶ್ರೀಗಂಧದ ತುಂಡುಗಳಿಗೆ ಇಲಾಖಾ ಛಾಪಾ ಕೆಎನ್‌ಎಫ್‌ಡಿಆರ್ 1 ಬಿಬಿ ಎಂದು ಮುದ್ರಿಸಿ ಕ್ರಮ ಸಂಖ್ಯೆ: 1 ರಿಂದ 95ನ್ನು ಕೆಂಪು ಬಣ್ಣದಿಂದ ನೀಡಿ ಅಳತೆ ಮಾಡಿ ಸ್ಥಳದಲ್ಲಿ ಪಂಚರ ಸಮಕ್ಷಮ ಪಂಚನಾಮೆ ಜರುಗಿಸಿ ವಾಹನ ಹಾಗೂ ಶ್ರೀಗಂಧದ ತುಂಡುಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ ಕಛೇರಿ ಆವರಣಕ್ಕೆ ತರಲಾಯಿತು ನಂತರ ಪ್ರಥಮ ಮಾಹಿತಿ ವರ್ತಮಾನ ಮತ್ತು ಇನ್ನಿತರ ದಾಖಲಾತಿಗಳನ್ನು ನ್ಯಾಯಾಲಯಕ್ಕೆ ಸಲ್ಲಿಸಲು ತೀರ್ಮಾನಿಸಲಾಯಿತು. ಭದ್ರಾವತಿ ವಲಯದ ನಗರ ತನಿಖಾ ವನಪಾಲಕರು ಪ್ರಕರಣವನ್ನು ಅರಣ್ಯ ಕಾಯಿದೆ 1963 ಸೆಕ್ಷನ್ 84-85, 86, 87, ಹಾಗೂ 71(ಎ) ಪ್ರಕಾರ ಮತ್ತು ರೂಲ್ 1969 ಸೆಕ್ಷನ್ 144 ರಂತೆ ಕ್ರಮ ಜರುಗಿಸಿ ಈ ನ್ಯಾಯಾಲಯದ ಸಮಕ್ಷಮ ಮುಂದಿನ ಕ್ರಮಕ್ಕಾಗಿ ಒಪ್ಪಿಸಿರುತ್ತಾರೆ. ಸದರಿ ಪ್ರಕರಣವನ್ನು ಅರಣ್ಯ ಕಾಯಿದೆ 71(ಎ) ಪ್ರಕಾರ ಕ್ರಮ ಜರುಗಿಸಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಹಾಗೂ ಅರಣ್ಯ ಉತ್ಪನ್ನಗಳನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೂ ವಲಯ ಅರಣ್ಯಾಧಿಕಾರಿ ತರೀಕೆರೆ ಶ್ರೀಗಂಧ ಹಾಗೂ ನಾಟಾ ಸಂಗ್ರಹಾಲಯ ತರೀಕೆರೆರವರ ವಶಕ್ಕೆ ಸುರಕ್ಷತೆಗೆ ನೀಡಿರುತ್ತದೆ.

ಈ ಪ್ರಕರಣದಲ್ಲಿ ಅಭಿಯೋಜನಾವತಿಯಿಂದ ಶ್ರೀ ಚಂದ್ರಮೌಳಿ ಪ್ರಥಮ ದರ್ಜೆ ಸಹಾಯಕ ಸಿರಿಗೆರೆ ವಲಯ ಶಿವಮೊಗ್ಗ ಅರಣ್ಯ ವಿಭಾಗ ಇವರು ಈ ನ್ಯಾಯಾಲಯದಲ್ಲಿ ದಿನಾಂಕ: 04.12.2002ರಂದು ಪಿಡಬ್ಲ್ಯೂ1 ಸಾಕ್ಷಿದಾರರಾಗಿ ಹಾಜರಾಗಿ ಹೇಳಿಕೆ ನೀಡಿರುತ್ತಾರೆ. ಅವರ ಹೇಳಿಕೆ ಪ್ರಕಾರ 1993ರಲ್ಲಿ ನಾನು ಭದ್ರಾವತಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿಯಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದೆನು ದಿನಾಂಕ: 18.02.93 ರಂದು ಬೆಳಿಗ್ಗೆ 11-15 ಗಂಟೆಗೆ ನಿಸ್ತಂತು ಮೂಲಕ ಒಂದು ವಾಹನ ತಪ್ಪಿಸಿಕೊಂಡು ಬರುತ್ತಿರುವುದಾಗಿ ತರೀಕೆರೆ ಅರಣ್ಯ ತನಿಖಾ ಠಾಣೆಯಿಂದ ವರ್ತಮಾನ ಬಂತು 11-30 ಗಂಟೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ನನಗೆ ಮತ್ತು ಹರೀಶ್ ಎಂಬುವರು ಮತ್ತು ವೆಂಕಟೇಶ್ ಎಂಬ ಅರಣ್ಯ ಪಾಲಕರು ಇವರಿಗೆ ಬೈಪಾಸ್ ರಸ್ತೆಗೆ ಹೋಗಿ ಬರುವ ವಾಹನವನ್ನು ತಪಾಸಣೆ ಮಾಡಬೇಕೆಂದು ಆದೇಶಿಸಿದರು.

ನಾವು ಇಲಾಖಾ ಕಾರಿನಲ್ಲಿ ಬೈಪಾಸ್ ರಸ್ತೆಗೆ ಹೋದೆವು ಸುಮಾರು 11-30ರ ಸಮಯಕ್ಕೆ ತರೀಕೆರೆ ಕಡೆಯಿಂದ ಶಿವಮೊಗ್ಗಕ್ಕೆ ಹೋಗುವ ರಸ್ತೆಯಲ್ಲಿ ಬಿಳಿಯ ಮಾರುತಿ ವ್ಯಾನು ಬಂದಿತು. ಸದರಿ ವಾಹನವನ್ನು ನಿಲ್ಲಿಸಲು ಸೂಚನೆ ನೀಡಿದರು ವಾಹನವನ್ನು ಸ್ವಲ್ಪ ದೂರದಲ್ಲಿ ನಿಲ್ಲಿಸಿ ವಾಹನದಲ್ಲಿ ಇದ್ದ ವ್ಯಕ್ತಿಗಳು ಓಡಲು ಶುರು ಮಾಡಿದರು. ಅವರು ಹಿಡಿಯುವ ಪ್ರಯತ್ನದಲ್ಲಿ ಅವರು ನಮ್ಮ ಕೈಗೆ ಸಿಗದೇ ಪರಾರಿಯಾದರು. ವಾಹನವನ್ನು ತಪಾಸಣೆ ಮಾಡಿ ನೋಡಿದಾಗ ವಾಹನದಲ್ಲಿ ಶ್ರೀಗಂಧದ ತುಂಡುಗಳು ಇದ್ದುದು ಕಂಡು ಬಂದಿತು. ವಾಹನ ಸಂಖ್ಯೆ: ಕೆಎ-01-1401 ಆಗಿತ್ತು. ವಾಹನದಲ್ಲಿ 95 ಕೆಜಿ ಶ್ರೀಗಂಧದ ತುಂಡುಗಳು ಇತ್ತು ಅವುಗಳನ್ನು ಅಳತೆ ಮಾಡಿ ಇಲಾಖಾ ಛಾಪವನ್ನು ಹಾಕಿದೆವು ಆಯಿಲ್ ಚಾಕಿನಲ್ಲಿ ನಂಬರ್ ಕೊಟ್ಟು ವಾಹನ ಮತ್ತು ಶ್ರೀಗಂಧದ ತುಂಡುಗಳನ್ನು ಸ್ಥಳದಲ್ಲಿ ಅಮಾನತ್ತು ಪಡಿಸಿಕೊಂಡೆವು. ನಮ್ಮ ಇಲಾಖೆ ನೌಕರ ಹರೀಶ್ ಅವರ ಕೈ ಬರಹದಲ್ಲಿ ಮಹಜರನ್ನು ಬರೆಯಲಾಯಿತು. ನಿಶಾನೆ ಪಿ1 ಮಹಜರ್ ಆಗಿದ್ದು ನಿಶಾನೆ ಪಿ1ಎ ನನ್ನ ಸಹಿ ಆಗಿರುತ್ತದೆ. ಸದರಿ ವಾಹನ ಮತ್ತು ಶ್ರೀಗಂಧದ ತುಂಡುಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿಗೆ ತರಲಾಯಿತು. ಫಾರೆಸ್ಟ್ ವೆಂಕಟೇಶರವರು ಎಫ್‌ಐಆರ್ ನ್ನು ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ವಾಹನದಲ್ಲಿ 2 ಜನರು ಇದ್ದು 2 ಜನರು ಓಡಿ ಹೋಗಿದ್ದಾರೆ. ನಾನು ವನಪಾಲಕ ವೆಂಕಟೇಶ, ಹರೀಶ್ ಇನ್ನಿಬ್ಬರು ವ್ಯಕ್ತಿಗಳು ಅವರ ಹೆಸರು ಮರೆತು ಹೋಗಿದೆ ಸಹ ಇದ್ದೆವು ಪಾಟೀ ಸವಾಲು ರವಿ ವಕೀಲರಿಂದ ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ ಪಿಡಬ್ಲ್ಯೂ1 ಸಾಕ್ಷಿದಾರರು ಹೇಳಿಕೆ ನೀಡಿ ತರೀಕೆರೆ ನಿಸ್ತಂತು ಸಂದೇಶದ ಸಂದರ್ಭದಲ್ಲಿ ನಿಸ್ತಂತು ಉಪಕರಣ ಕರ್ತವ್ಯ ನಿರ್ವಹಿಸುತ್ತಿದ್ದ ಕೊಠಡಿಯಲ್ಲಿ ಇತ್ತು. ನಿಸ್ತಂತು ಸಂದೇಶವನ್ನು ಹರೀಶರವರೆ ಪಡೆದುಕೊಳ್ಳುತ್ತಿದ್ದರು ಬರುತ್ತಿದ್ದ ಸಂದೇಶವನ್ನು ನಾವು ಯಾವುದೇ ಪ್ರತ್ಯೇಕ ಹಾಳೆಯಲ್ಲಿ ಬರೆದುಕೊಳ್ಳುತ್ತಿರಲಿಲ್ಲ ಬಂದ ಸಂದೇಶವನ್ನು ಬಾಯಿ ಮಾತಿನಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರಿಗೆ ತಿಳಿಸುತ್ತಿದ್ದೆವು. ನಾವು ತಿಳಿಸಿದ ವಿಷಯವನ್ನು ಉಅಸಂ ರವರು ಬರವಣಿಗೆಯಲ್ಲಿ ಬರೆದುಕೊಳ್ಳುತ್ತಿದ್ದರು. ಭದ್ರಾವತಿ ವಲಯ ಅರಣ್ಯಾಧಿಕಾರಿ ಕಛೇರಿಗೆ ಉಅಸಂ ರವರೇ ಫೋನ್ ಮಾಡಿದ್ದರು. ಭದ್ರಾವತಿ ವಲಯ ಕಛೇರಿಯಲ್ಲಿ ಒಬ್ಬ ವಲಯ ಅರಣ್ಯಾಧಿಕಾರಿ ಇದ್ದು ಅವರ ಕೈಕೆಳಗಿನ ಸಿಬ್ಬಂದಿ ಎಷ್ಟು ಜನ ಎಂಬುದು ನನಗೆ ಗೊತ್ತಿಲ್ಲ. ಬೈಪಾಸ್ ರೋಡಿಗೆ ಕಾರಿನಲ್ಲಿ ವಾಹನ ಚಾಲಕ ಸಹಿತ 4 ಜನ ಹೋದೆವು ಭದ್ರಾವತಿಯಲ್ಲಿ ನಾನು 5 ವರ್ಷ ಕರ್ತವ್ಯ ನಿರ್ವಹಿಸುತ್ತಿದ್ದು ಶಿವಮೊಗ್ಗದಿಂದ ಓಡಾಡುತ್ತಿದ್ದೇನೆ. ವಲಯ ಅರಣ್ಯಾಧಿಕಾರಿ ಕಛೇರಿಗೆ ಹೊಳೆಯಿಂದ ಆಚೆ ಇದೆ ಅದು ಯಾವ ರಸ್ತೆ ಎಂಬುದು ನನಗೆ ಗೊತ್ತಿಲ್ಲ.

ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಸಹಾಯಕ್ಕಾಗಿ ಯಾವುದಾದರೂ ಪೊಲೀಸ್ ಠಾಣೆಗೆ ಫೋನ್ ಮುಖೇನ ಸಂಪರ್ಕ ಮಾಡಿದರೋ ಇಲ್ಲವೆ ಎಂಬುದು ನನಗೆ ಗೊತ್ತಿಲ್ಲ ನಾವು ಹೋಗುವಾಗ ಫಾರೆಸ್ಟ್ ರವರು ಗನ್ನನ್ನು ತೆಗೆದುಕೊಂಡು ಬಂದಿದ್ದರು. ನಮಗೆ ಬಂದ ನಿಸ್ತಂತು ಸಂದೇಶದಲ್ಲಿ ಮಾರುತಿ ವ್ಯಾನು ತಪ್ಪಿಸಿಕೊಂಡು ಬರುತ್ತಿದೆ ಎಂದು ತಿಳಿಸಿದರು. ತರೀಕೆರೆಯಲ್ಲಿರುವ ಅರಣ್ಯ ತನಿಖಾ ಠಾಣೆ ಯಾವ ರೋಡಿನಲ್ಲಿ ಬರುತ್ತದೆ ಎಂಬುದು ನನಗೆ ಗೊತ್ತಿಲ್ಲ. ಸಾಕ್ಷಿ ಮುಂದುವರೆದು ಹೇಳುತ್ತಾರೆ ವಲಯ ಅರಣ್ಯಾಧಿಕಾರಿಗಳ ಕಛೇರಿ ಪಕ್ಕದಲ್ಲಿ ಇರುತ್ತದೆ ಎಂದು ಹೇಳುತ್ತಾರೆ. ಬಿ.ಹೆಚ್. ರಸ್ತೆಯಲ್ಲಿ ಬರುವ ವಾಹನವನ್ನು ತನಿಖಾ ಠಾಣೆಯಲ್ಲಿ ತಪಾಸಣೆ ಮಾಡಲಾಗುತ್ತದೆ. ತನಿಖಾ ಠಾಣೆಯಿಂದ 2-3 ಕಿ.ಮೀ. ಮುಂದೆ ಬಂದರೆ ಮುಖ್ಯ ರಸ್ತೆಯಿಂದ ಎಡಭಾಗಕ್ಕೆ ಅಂದರೆ ಪಶ್ಚಿಮ ದಿಕ್ಕಿಗೆ ತಿರುಗಿ ಲಕ್ಕವಳ್ಳಿ ಕಡೆಗೆ ಹೋಗುತ್ತದೆ ಹಾಗೂ ನೇರವಾಗಿ ಭದ್ರಾವತಿ ಕಡೆಗೆ ಬರುತ್ತದೆ. ಅಮಾನತ್ತು ಪಡಿಸಿಕೊಂಡ ಶ್ರೀಗಂಧ ತುಂಡುಗಳಿಗೆ ಸಂಖ್ಯೆಯನ್ನು ಕೊಟ್ಟು ಆಯಿಲ್ ಚಾಕ್ ವನಪಾಲಕರೇ ತೆಗೆದುಕೊಂಡು ಬಂದಿದ್ದರು. ಆಯಿಲ್ ಚಾಕ್ ಸಾಮಾನ್ಯವಾಗಿ ಅವರ ಬ್ಯಾಗಿನಲ್ಲೇ ಇರುತ್ತದೆ. ತರೀಕೆರೆ ಅರಣ್ಯ ತನಿಖಾ ಠಾಣೆಯಲ್ಲಿ ವಿಚಾರಿಸಲಾಗಿ ಶಿವಮೊಗ್ಗದಿಂದ ಬಂದ ಮಾರುತಿ ವಾಹನ ಗೇಟ್ ಹಾಕುವುದನ್ನು ನೋಡಿ ತಿರುಗಿ ಶಿವಮೊಗ್ಗ ಕಡೆ ಬರುತ್ತಿದೆ ಎಂದು ಹೇಳಿದರು. ನಾವು ಸ್ಥಳಕ್ಕೆ ಹೋದಾಗ ನಮ್ಮ ಎದುರಿನಿಂದ ವಾಹನ ಬಂತು.

ಈ ವಾಹನವಲ್ಲದೇ ಬೇರೆ ವಾಹನಗಳು ರಸ್ತೆಯಲ್ಲಿ ಓಡಾಡುತ್ತಾ ಇದ್ದವು. ಬೇರೆ ಯಾವುದೇ ವಾಹನಗಳನ್ನು ನಾವು ತಪಾಸಣೆ ಮಾಡಲಿಲ್ಲ. ಮಾರುತಿ ವಾಹನಕ್ಕೋಸ್ಕರವೇ ಕಾಯುತ್ತಾ ಇದ್ದೆವು. ವಾಹನವನ್ನು ನಿಲ್ಲಿಸಲು ಸೂಚಿಸಿದಾಗ ನಮ್ಮಿಂದ 200-250 ಅಡಿ ದೂರದಲ್ಲಿ ವಾಹನವನ್ನು ನಿಲ್ಲಿಸಿ ವಾಹನದಲ್ಲಿದ್ದ ವ್ಯಕ್ತಿಗಳು ಓಡಲು ಪ್ರಾರಂಭಿಸಿದರು ಆ ಸಮಯದಲ್ಲಿ ನಮ್ಮ ವಾಹನ ವಲಯ ಅರಣ್ಯಾಧಿಕಾರಿಗಳನ್ನು ಸಂಪರ್ಕಿಸಲು ನಮ್ಮಲ್ಲಿ ಯಾವುದೇ ಸಂಪರ್ಕ ಸಾಧನ ಇರಲಿಲ್ಲ. ವಾಹನವನ್ನು ಕಳುಹಿಸಿ ಬೇರೆಯವರನ್ನು ಕರೆಸಲು ಪ್ರಯತ್ನಪಡಲಿಲ್ಲ ಬೈಪಾಸ್ ರಸ್ತೆಯ ಪಕ್ಕದಲ್ಲಿ ಇರುವ ಜನರನ್ನು ವೆಂಕಟೇಶರವರು ಕರೆ ತಂದರು. ಕಛೇರಿಯಿಂದ ಹೊರಡುವ ಸಂದರ್ಭದಲ್ಲಿ ನಾವು ಪಂಚರನ್ನು ಕರೆದುಕೊಂಡು ಹೋಗಲು ಸಮಯಾವಕಾಶ ಇರಲಿಲ್ಲ. ಮಹಜರನ್ನು ಮತ್ತು ಎಫ್‌ಐಆರ್ ನ್ನು ಪ್ರಥಮವಾಗಿ ವನಪಾಲಕ ವೆಂಕಟೇಶರವರು ಉಪ ಅರಣ್ಯ ಸಂರಕ್ಷಣಾಧಿಕಾರಿಯವರಿಗೆ ಸಲ್ಲಿಸಿರುತ್ತಾರೆ. ಬರೆದಿರುವ ಮೂಲ ಮಹಜರಿನಲ್ಲಿ ಬಿಳಿ ಲೆಡ್ ನಿಂದ ಯಾರೋ ಗುರುತನ್ನು ಮಾಡಿರುತ್ತಾರೆ ಎಂಬುದು ನನಗೆ ಗೊತ್ತಿಲ್ಲ. ವಾಹನದಲ್ಲಿ ದಾಖಲಾತಿಗಳು ಇದ್ದ ಬಗ್ಗೆ ನನಗೆ ಗೊತ್ತಿಲ್ಲ. ವೆಂಕಟೇಶರವರಿಗೆ ಸಂಬಂಧಪಟ್ಟಿದ್ದು ಆಗಿರುತ್ತದೆ. ಓಡಿ ಹೋದ ವ್ಯಕ್ತಿಗಳಿಗೆ ಗಾಳಿಯಲ್ಲಿ ಗುಂಡು ಹಾರಿಸಿ ಬೆದರಿಸುವ ಪ್ರಯತ್ನ ಮಾಡಲಿಲ್ಲ. ಮುಖ್ಯವಾದ ಸಂದೇಶಗಳು ಬಂದ ಸಂದರ್ಭದಲ್ಲಿ ಬರುವಂತಹ ಸಂದೇಶದ ಕೋಡ್ ನಂ. ನ್ನು ಬರೆದುಕೊಳ್ಳುವ ಪದ್ಧತಿ ಇದೆ ಆದರೆ ಆ ಸಂದರ್ಭದಲ್ಲಿ ಈ ವಿಭಾಗಕ್ಕೆ ಹೊಸದಾಗಿ ನಿಸ್ತಂತು ಉಪಕರಣ ಬಂದ ಕಾರಣ ಅವುಗಳನ್ನು ಆಗ ಬರೆದು ಕೊಳ್ಳುತ್ತಿರಲಿಲ್ಲ. ಸದರಿ ದಿನ ನಾವು ಸ್ಥಳಕ್ಕೆ ಹೋಗಿರಲಿಲ್ಲ ಯಾವುದೇ ನಿಸ್ತಂತು ಸಂದೇಶ ಬಂದಿಲ್ಲ ವಾಹನದಲ್ಲಿ ಶ್ರೀಗಂಧದ ತುಂಡು ಇರಲಿಲ್ಲ ಅನ್ನುವುದು ಸರಿಯಲ್ಲ. ಅಧಿಕಾರಿಗಳ ಮೇಲೆ ಮಾತು ಕೇಳಿ ಕೇಸು ಹಾಕಿದ್ದೇನೆ ಅನ್ನುವುದು ಸರಿಯಲ್ಲ ಎಂದು ತಿಳಿಸಿರುತ್ತಾರೆ.

ಮೇಲ್ಕಂಡ ಪಿಡಬ್ಲ್ಯೂ1 ಸಾಕ್ಷಿದಾರರು ನೀಡಿರುವ ಹೇಳಿಕೆ ಮತ್ತು ಸ್ಥಳ ಮಹಜರ್ ನಲ್ಲಿರುವ ಎಲ್ಲಾ ಅಂಶಗಳು ಒಂದಕ್ಕೊಂದು ತಾಳೆ ಹೊಂದಿದ್ದು ಯಾವುದೇ ವಿರೋಧ ಹೇಳಿಕೆಗಳು ಬಂದಿರುವುದಿಲ್ಲ ಅಲ್ಲದೆ ಕಾನೂನು ಪ್ರಕಾರ ಎಲ್ಲಾ ದಾಖಲಾತಿಗಳನ್ನು ಸಿದ್ದಪಡಿಸಿ ನ್ಯಾಯಾಲಯಕ್ಕೆ ಹಾಜರುಪಡಿಸಿ ಗುರುತಿಸಿಕೊಂಡಿರುತ್ತಾರೆ. ವಾಹನ ಮಾರುತಿ ವ್ಯಾನ್ ನಂ. ಕೆಎ-01 ಎಂ-1401 ರಲ್ಲಿ ಅಕ್ರಮವಾಗಿ ರಹದಾರಿಯಿಲ್ಲದೇ 95=316 ಕೆ.ಜಿ. ಶ್ರೀಗಂಧದ ತುಂಡುಗಳು ಸಾಗಾಣಿಕೆ ಆಗಿರುವುದು ಖಚಿತಪಡಿಸಿರುತ್ತಾರೆ. ಹಾಗೂ ಅರಣ್ಯ ಕಾಯಿದೆ ಉಲ್ಲಂಘನೆ ಮಾಡಿರುವುದನ್ನು ಸಹ ದೃಢಪಡಿಸಿರುತ್ತಾರೆ. ಆದ್ದರಿಂದ ಅಂಶ 1 ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ-2**

ದಿನಾಂಕ: 30.09.93 ರಂದು ವ್ಯವಸ್ಥಾಪಕ ನಿರ್ದೇಶಕರು ಮೆ. ಇಂಟೀಗ್ರೇಟೆಡ್ ಫೈನಾನ್ಸ್ ಕಂಪನಿ. ಲಿ., ಬೆಂಗಳೂರು ಇವರು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿ ದಿನಾಂಕ: 09.11.92 ರಂದು ಬಾಡಿಗೆ ಕರಾರು ಒಪ್ಪಂದ ಪ್ರಕಾರ ಮಾರುತಿ ವ್ಯಾನು ನಂ. ಕೆಎ-01 ಎಂ-1401 ನ್ನು ಶ್ರೀ ಕೆ ಮಂಜುನಾಥ, ಬೆಂಗಳೂರು ಇವರಿಗೆ ಬಾಡಿಗೆ ಕರಾರಿನ ಮೇರೆಗೆ ಪಾವತಿಸಲು ಸೂಚಿಸಿದ್ದು ಸದರಿ ರವರು 09.11.92 ರಿಂದ 01.10.95ರ ವರೆಗೆ ರೂ.1,63,005-00ನ್ನು ಪಾವತಿಸಿರುತ್ತಾರೆ ಬಾಕಿ ಉಳಿದ ಹಣ ಪಾವತಿಸಿದ ನಂತರ ವಾಹನದ ಮಾಲಿಕರಾಗಿರುತ್ತಾರೆ ಆದ್ದರಿಂದ ಪ್ರಸ್ತುತ ಅರ್ಜಿದಾರರು/ ಫೈನಾನ್ಸ್ ಕಂಪನಿಯ ವಾಹನದ ಬಗ್ಗೆ ಹಕ್ಕುಳ್ಳವರಾಗಿರುತ್ತಾರೆ. ಈ ಪ್ರಕರಣಕ್ಕೆ ನನಗೂ ಯಾವುದೇ ಸಂಬಂಧ ಇರುವುದಿಲ್ಲ ದಯಮಾಡಿ ವಾಹನ ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ಈ ಪ್ರಕರಣದ ಬಗ್ಗೆ ವಾಹನದ ಮಾಲಿಕರಿಗೆ ಅರಣ್ಯ ಕಾಯಿದೆ 1963 ಸೆಕ್ಷನ್ 71 (ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ವಾಹನದ ಮಾಲಿಕರು ದಿನಾಂಕ: 30.04.93 ರಂದು ಈ ನ್ಯಾಯಾಲಯದ ನೋಟೀಸಿಗೆ ಸಮಜಾಯಿಸಿ ನೀಡಿ ವಾಹನದಲ್ಲಿ ನಡೆದ ಈ ಪ್ರಕರಣಕ್ಕೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ ವಾಹನದ ಬಗ್ಗೆ ಹೈಪಾಥಿಕೇಟೆಡ್ ಆಗಿದ್ದು ವಾಹನದ ಅಸಲು ಮಾಲಿಕರಾಗಿರುತ್ತೇನೆ ದಯಮಾಡಿ ವಾಹನ ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ಅರ್ಜಿದಾರರ ಅರ್ಜಿಗಳನ್ನು ಮತ್ತು ಅವರು ಸಲ್ಲಿಸಿದ ದಾಖಲಾತಿಗಳನ್ನು ಪರಿಶೀಲಿಸಿದಾಗ ಅರ್ಜಿದಾರರು ವಾಹನದ ಮಾಲಿಕರೆಂದು ಹೇಳಿಕೊಳ್ಳುತ್ತಿದ್ದು ವಾಹನದ ಉಸ್ತುವಾರಿಯ ಬಗ್ಗೆ ಸಂಪೂರ್ಣ ಹೊಣೆಗಾರಿಕೆ ಅವರದಾಗಿರುತ್ತದೆ. ಈ ಪ್ರಕರಣದಲ್ಲಿ ಯಾವುದೇ ಪಾತ್ರ ಇಲ್ಲವೆಂದು ಹೇಳುತ್ತಿದ್ದು, ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ಒದಗಿಸಿರುವುದಿಲ್ಲ. ಅರ್ಜಿದಾರರು ಸಹ ಅರಣ್ಯ ಅಪರಾಧ ಪ್ರಕರಣದಲ್ಲಿ ಭಾಗಿಯಾಗಿರುವುದು ಮೇಲು ನೋಟಕ್ಕೆ ಕಂಡು ಬಂದಿರುವುದರಿಂದ ಅವರ ಮಧ್ಯಂತರ ಅರ್ಜಿಯನ್ನು ದಿನಾಂಕ: 16.09.94ರಲ್ಲಿ ತಿರಸ್ಕರಿಸಿರುತ್ತದೆ. ಅರ್ಜಿದಾರರು ಶಿವಮೊಗ್ಗ ಜಿಲ್ಲಾ ಸೆಷನ್ಸ್ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿದ್ದು, ಮಾನ್ಯ ನ್ಯಾಯಾಲಯವು ಕೆಲವೊಂದು ಷರತ್ತುಗಳನ್ನು ಹೊರಡಿಸಿ ವಾಹನವನ್ನು ತಾತ್ಕಾಲಿಕ ಬಿಡುಗಡೆಗೆ ಆದೇಶ ಹೊರಡಿಸಿರುತ್ತದೆ. ವಾಹನದ ಮಾಲಿಕರು ವಾಹನವನ್ನು ವಶಕ್ಕೆ ಪಡೆದಿರುವುದಿಲ್ಲ. ಈ ಪ್ರಕರಣದ ಬಗ್ಗೆ ಅರ್ಜಿದಾರರಿಗೆ 04.12.2002, 09.04.2003, 28.05.2003, 16.07.2003, 22.10.2003, 17.12.2003, 04.03.2004 ಮತ್ತು 07.04.2004 ದಿನಾಂಕಗಳಂದು ನೋಟೀಸ್ ಕಳುಹಿಸಿ ನ್ಯಾಯಾಲಯಕ್ಕೆ ಹಾಜರಾಗಲು ಸೂಚಿಸಿರುತ್ತದೆ. ವಾಹನದ ಮಾಲಿಕರು ಹಾಗೂ ಅವರ ಪರ ವಕೀಲರು ದಿನಾಂಕ: 04.12.2002 ರಂದು ಮಾತ್ರ ನ್ಯಾಯಾಲಯಕ್ಕೆ ಹಾಜರಾಗಿದ್ದು ಸದರಿ ದಿನಾಂಕದಂದು ಪ್ರಕರಣಕ್ಕೆ ಸಂಬಂಧಿಸಿದಂತೆ, ಮಾರುತಿ ವ್ಯಾನು ಸಂಖ್ಯೆ: ಕೆಎ-01-ಎಂ-1401ರಲ್ಲಿ ಯಾವುದೇ ಅರಣ್ಯ ಪ್ರಕರಣದಲ್ಲಿ ಯಾವುದೇ ಪರೋಕ್ಷ ಅಥವಾ ಪ್ರತ್ಯಕ್ಷವಾಗಿ ನಾನು ಭಾಗಿ ಆಗಿರುವುದಿಲ್ಲ ಎಂಬ ಬಗ್ಗೆ ಸಾಕ್ಷ್ಯಾಧಾರಗಳನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುವುದಿಲ್ಲ ಅಲ್ಲದೇ ಮುಂದೆ ಯಾವುದೇ ದಿನಾಂಕಗಳಂದು ನ್ಯಾಯಾಲಯದಲ್ಲಿ ಒಂದು ವಿಚಾರಣೆಗೂ ಸಹ ಹಾಜರಾಗದೇ ಗೈರು ಹಾಜರಾಗಿರುತ್ತಾರೆ.

ಅರ್ಜಿದಾರರ ವಾಹನದಲ್ಲಿ ಅರಣ್ಯ ಉತ್ಪನ್ನವಾದ ಶ್ರೀಗಂಧದ ತುಂಡುಗಳು ಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲಿಕರು ಅಥವಾ ಅವರ ಪ್ರತಿನಿಧಿಗಳು ಯಾವುದೇ ಮುನ್ನೆಚ್ಚರಿಕೆ ವಹಿಸದ ಬಗ್ಗೆ ಸಮರ್ಪಕವಾಗಿ ಸಾಕ್ಷ್ಯಾಧಾರ ನೀಡಿರುವುದಿಲ್ಲ, ವಾಹನದಲ್ಲಿ ತನ್ನ ಗಮನಕ್ಕೆ ಬಾರದಂತೆ

ಈ ಕೃತ್ಯ ನಡೆದಿದೆ ಎಂಬುದನ್ನು ಕರ್ನಾಟಕ ಅರಣ್ಯ ಕಾಯಿದೆ ಕಲಂ 71 (ಬಿ)(2)ರ ರೀತ್ಯ ಸಾಬೀತು ಪಡಿಸುವ ಜವಾಬ್ದಾರಿ ವಾಹನದ ಮಾಲಿಕರಿಗೆ ಸೇರಿದ್ದಾಗಿರುತ್ತದೆ. ಅಲ್ಲದೆ ವಾಹನದ ಮಾಲಿಕರ ಏಜೆಂಟರಾಗಲಿ ಚಾಲಕನಾಗಲಿ ಅಥವಾ ಇತರೆ ನಂಬಿಕೆ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮ ಸಾಗಾಣಿಕೆಯಾಗದಂತೆ ಮುನ್ನೆಚ್ಚರಿಕೆ ವಹಿಸುವುದು ಸಹ ಇವರುಗಳ ಜವಾಬ್ದಾರಿಯಾಗಿರುತ್ತದೆ.

"Without prejudice to the provisions of sub-section (1), no order confiscating any tool, rope, chain, boat, vehicle or cattle shall be made under section 71A it the owner of the tool, rope, chain, boat, vehicle or cattle proves to the satisfaction of the authorised officer that it was used in carrying the timber, sandalwood, charcoal, firewood or ivory without the knowledge or connivance of the owner himself, his agent, if any, and the person in charge of the tool, rope, chain, boat, vehicle or cattle and that each of them had taken all reasonable and necessary precautions against such use."

ಮಾರುತಿ ವ್ಯಾನು ನಂ.ಕೆಎ-01-ಎಂ-1401ರ ವಾಹನದಲ್ಲಿ ಅರಣ್ಯ ಉತ್ಪನ್ನವು ಕಾನೂನು ಬಾಹಿರವಾಗಿ ಸಾಗಿಸದಂತೆ ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿದ್ದೇವೆ ಎಂಬುದನ್ನು ಸಾಕ್ಷಿ ಹಾಗೂ ಪುರಾವೆಗಳ ಸಹಿತ ಈ ಪ್ರಕರಣದಲ್ಲಿ ಸಾಬೀತು ಪಡಿಸಲು ವಾಹನದ ಮಾಲಿಕರು ಹಾಗೂ ಅವರ ಪರ ವಕೀಲರು ಸಂಪೂರ್ಣ ವಿಫಲಗೊಂಡಿರುತ್ತಾರಾದ್ದರಿಂದ ಪ್ರಕರಣದ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಹಾಲಿ ಪ್ರಕರಣಕ್ಕೆ ಕೇರಳ ರಾಜ್ಯದ ತೀರ್ಮಾನ ಕ್ರೈಮ್ಸ್ 2000 (3) ಪುಟ 563 ಅತ್ಯಂತ ಸರಿ ಹೊಂದುವಂತಹ ತೀರ್ಮಾನವಾಗಿರುತ್ತದೆ ಅದರ ಉದ್ಧೃತ ಭಾಗ ಈ ಕೆಳಕಂಡಂತಿದೆ.

"The contention that such a strict view would adversely affect an innocent vehicle owner cannot be countenanced since any narrow or liberal interpretation of confiscatory provisions in the Act can eventually lead to disastrous consequences for forest wealth which is a very endangered bounty of nature. The idea behind extension of confiscatory provisions to vehicles etc., is to convey a pre-emptory and explicit message to the vehicle owners not to allow their vehicles to be used for depletion of forest wealth. If any vehicle is caught in the nefarious act of carrying illicit forest produce, it is not enough that the owner establishes his innocence alone. If he wants to retrieve his vehicle he must show further that the person who was in-charge of the vehicle has taken reasonable and necessary precautionary measures against such user of the vehicle. The owner cannot rest with establishing his innocence in the matter. It may be that having succeeded in showing his innocence his failure to establish the next limb might lead to hard consequences to him. Legislature intended, by providing such stringent conditions, to prevent harder consequences for the society and for the posterity."

ಕರ್ನಾಟಕ ಅರಣ್ಯ ಕಾಯಿದೆ ಕಲಂ 80ರ ಪ್ರಕಾರ ಯಾವುದೇ ಅರಣ್ಯ ಉತ್ಪನ್ನಗಳು ಅರಣ್ಯ ಪ್ರಕರಣದಲ್ಲಿ ಪ್ರಾಥಮಿಕ ಹಂತದಲ್ಲಿ ಸರ್ಕಾರದ್ದೆಂದೇ ಭಾವಿಸಬೇಕಾಗಿದ್ದು ಆಪಾದನೆ ಹೊರಿಸಲ್ಪಟ್ಟ ವ್ಯಕ್ತಿ ಅಮಾನತ್ತುಪಡಿಸಿಕೊಂಡ ಮರವು ತನಗೆ ಸೇರಿದೆ ಎಂಬುದನ್ನು ಪುರಾವೆ ಮಾಡುವ ಹೊಣೆಯನ್ನು ಹೊರಬೇಕಾಗಿರುತ್ತದೆ.

"When in any proceedings taken under this Act or in consequence of anything done under this Act or under any other law for the time being in force, a question arises as to whether any forest produce is the property of the State Government, such produce shall be presumed to be the property of the State Government until the contrary is proved, and in case of any prosecution the burden of proving the contrary shall lie on the accused."

ಅರಣ್ಯ ಕಾಯಿದೆ 1963 ಕಲಂ 84ರ ಪ್ರಕಾರ ಶ್ರೀಗಂಧವು ಸರ್ಕಾರದ ಸ್ವತ್ತಾಗಿರುತ್ತದೆ.

(1) all Sandal trees which may grow in any land after the date of the commencement of this Act, and

(2) all Sandal trees existing on any land prior to the commencement of the Act. 2(***) shall be the exclusive property of the State Government.

3. (2) Where in any proceedings taken under this Act, a question arises as to whether any sandalwood is the property of the State Government, it shall, until the contrary is proved, be presumed to be the part of a sandal tree which was the exclusive property of the State Government under sub-section (1), and in the case of any prosecution, the burden of proving the contrary shall lie on the accused.

ಮೇಲ್ಕಂಡ ವಿದ್ಯಮಾನಗಳನ್ನು ಅವಲೋಕಿಸಿ ನೋಡಿದಾಗ ಅರ್ಜಿದಾರರ ತಿಳುವಳಿಕೆಗೆ ಬಂದು ಈ ಕೃತ್ಯ ನಡೆದಿದೆ ಹಾಗೂ ಅರ್ಜಿದಾರರು ಅಥವಾ ಅವರು ನೇಮಿಸಿದಂತಹ ವ್ಯಕ್ತಿಗಳು ಸಹ ಮೇಲ್ಕಂಡ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ಭಾಗವಹಿಸಿರುತ್ತಾರೆ ಎಂಬುದಕ್ಕೆ ಯಾವುದೇ ಸಂಶಯವಿರುವುದಿಲ್ಲ ಹಾಗೂ ಈ ವಾಹನವನ್ನು ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲಿಕರು ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುವುದಿಲ್ಲ. ಆದ್ದರಿಂದ ಅಂಶ 2 ನ್ನು ಇಲ್ಲ ಎಂದು ಉತ್ತರಿಸಲಾಗಿದೆ.

**ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ**

1. ಭದ್ರಾವತಿ ಅರಣ್ಯ ವಿಭಾಗದ ಭದ್ರಾವತಿ ವಲಯದ ನಗರ ತನಿಖಾ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ದಿನಾಂಕ: 16.02.93ರಂದು ಅಮಾನತ್ತು ಪಡಿಸಿಕೊಂಡ ಮಾರುತಿ ವ್ಯಾನು ಸಂಖ್ಯೆ: ಕೆಎ-01 ಎಂ-1401 ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧದ ತುಂಡುಗಳು ಸಾಗಾಣಿಕೆ ಆಗಿರುವುದು ಸ್ಥಳ ಮಹಜರ್ ಪ್ರಥಮ ಮಾಹಿತಿ ವರದಿಗಳಿಂದ ಹಾಗೂ ಅಭಿಯೋಜನಾ ಸಾಕ್ಷಿದಾರರು ನೀಡಿದ ಹೇಳಿಕೆಯಿಂದ ದೃಢಪಟ್ಟಿರುತ್ತದೆ.
2. ಹೈರ್ ಪರ್ಚೇಸ್ ಅಗ್ರಿಮೆಂಟ್ ನಿಯಮ 2(ಡಿ) ಪ್ರಕಾರ ವಾಹನದ ಆರ್‌ಸಿ ಮಾಲಿಕರು ಯಾವುದೇ ಕಾನೂನು ಬಾಹಿರ ಸರಕುಗಳನ್ನು ವಾಹನದಲ್ಲಿ ಸಾಗಿಸಕೂಡದು ಒಂದು ವೇಳೆ ಇಂತಹ ಅಪರಾಧದಲ್ಲಿ ವಾಹನ ಭಾಗಿ ಆಗಿ ಸರ್ಕಾರದ ಪರ ವಶಪಡಿಸಿಕೊಂಡಲ್ಲಿ ಸಂಪೂರ್ಣ

ಹೊಣೆಗಾರರು ಆರ್‌ಸಿ ಮಾಲಿಕರದಾಗಿರುತ್ತದೆ ಎಂದು ತಿಳಿಸಿದೆ ಈ ಪ್ರಕರಣದಲ್ಲಿ ಆರ್‌ಸಿ ಮಾಲಿಕರು ಈ ನ್ಯಾಯಾಲಯಕ್ಕೆ ವಾಹನ ಬಿಡುಗಡೆ ಕೋರಿ ಹಾಗೂ ನಾನು ನಿರಪರಾಧಿ ಎಂಬ ಬಗ್ಗೆ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿ ಯಾವುದೇ ಅರ್ಜಿ ಸಲ್ಲಿಸಿರುವುದಿಲ್ಲ. ಇದರಿಂದ ವಾಹನದ ಬಿಡುಗಡೆ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಅಲ್ಲದೇ ವಾಹನ ಆರ್.ಸಿ. ಮಾಲಿಕರಿಂದ, ವಾಹನದಿಂದ ಆದ ನಷ್ಟವನ್ನು ಹಣಕಾಸು ಸಂಸ್ಥೆಯವರು ವಸೂಲಿ ಮಾಡಿಕೊಳ್ಳಬೇಕಾಗಿರುತ್ತದೆ ವಿನಃ ಈ ನ್ಯಾಯಾಲಯದಲ್ಲಿ ವಾಹನ ಬಿಡುಗಡೆ ಕೋರಿ ಅರ್ಜಿ ಸಲ್ಲಿಸಿರುವುದು ಊರ್ಜಿತವಾಗಿರುವುದಿಲ್ಲ.

3. ಅರ್ಜಿದಾರರ/ ವಾಹನದ ಮಾಲಿಕರು ಅವರ ಗಮನಕ್ಕೆ ಬಾರದೇ ಈ ಮೇಲ್ಕಂಡ ಪ್ರಕರಣ ನೆಡೆದಿದೆ ಎಂಬುದಕ್ಕೆ ಯಾವುದೇ ಸಾಕ್ಷಿಗಳನ್ನು ಹಾಜರುಪಡಿಸಿರುವುದಿಲ್ಲ ಅಲ್ಲದೇ ಅವರು ಸಹ ನ್ಯಾಯಾಲಯಕ್ಕೆ ಹಾಜರಾಗದೇ ನ್ಯಾಯಾಲಯದಲ್ಲಿ ಆದೇಶ ಉಲ್ಲಂಘನೆ ಮಾಡಲಾಗಿರುತ್ತದೆ. ಆದ್ದರಿಂದ ವಾಹನವು ಕಳ್ಳಸಾಗಾಣಿಕೆಯಲ್ಲಿ ಭಾಗಿ ಆಗಿರುವುದಕ್ಕೆ ಯಾವುದೇ ಸಂಶಯವಿರುವುದಿಲ್ಲ.
4. ಅರಣ್ಯ ಕಾಯಿದೆ 1963 ನಿಯಮ 71(ಎ) ಯಿಂದ 71(ಬಿ) ರಲ್ಲಿ ತಿಳಿಸಿರುವಂತೆ ಯಾವುದೇ ವಾಹನವು ಅರಣ್ಯ ಅಪರಾಧದಲ್ಲಿ ಅಕ್ರಮವಾಗಿ ತೊಡಗಿದ ಹಾಗೂ ಅಂತಹ ಅಕ್ರಮ ಚಟುವಟಿಕೆಯಲ್ಲಿ ವಾಹನದ ಮಾಲಿಕರು ಹಾಗೂ ಅವರು ನೇಮಕ ಮಾಡಿದಂತಹ ವ್ಯಕ್ತಿಗಳು ಭಾಗಿಯಾಗಿದ್ದಾರೆ ಎಂಬುದು ಸ್ಪಷ್ಟವಾಗಿ ತಿಳಿದು ಬಂದಲ್ಲಿ ವಾಹನವನ್ನು ಏಕಪಕ್ಷೀಯವಾಗಿ ಸರ್ಕಾರಕ್ಕೆ ಮುಟ್ಟುಗೋಲು ಮಾಡಿಕೊಳ್ಳಬಹುದಾಗಿದೆ ಆದ್ದರಿಂದ ಈ ಕೆಳಗಿನಂತೆ ಆದೇಶ ನೀಡಲಾಗಿದೆ.

**ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲಾತಿಗಳನ್ನು ಪರಿಶೀಲಿಸಿ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ ಸೀಮಾಗರ್ಗ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) (2)ನೇ ತಿದ್ದುಪಡಿ ಪ್ರಕಾರ ಮಾರುತಿ ವ್ಯಾನು ನಂ. ಕೆಎ-01-ಎಂ-1401 (ಇಂಜಿನ್ ನಂ.523205 ಛಾಸೀಸ್ ನಂ. 843585) ಮತ್ತು ಅದರಲ್ಲಿದ್ದ ಶ್ರೀಗಂಧದ ತುಂಡುಗಳು 95=316 ಕೆಜಿ ಯನ್ನು ಏಕಪಕ್ಷೀಯವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ ಹಾಗೂ ಸದರಿ ಶ್ರೀಗಂಧದ ತುಂಡುಗಳನ್ನು ಇಲಾಖಾ ಕಾನೂನು ಪ್ರಕಾರ ವಿಲೆ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳಲು ಆದೇಶಿಸಿದೆ. ಸದರಿ ವಾಹನವು ಎಲ್ಲಾ ಋಣಭಾರಗಳಿಂದ ಮುಕ್ತವಾಗಿದೆ.

ಈ ಆದೇಶವನ್ನು ದಿನಾಂಕ: 01.12.2004 ರಂದು ಕರೆದು ನ್ಯಾಯಾಲಯದಲ್ಲಿ ಉಚ್ಚರಿಸಲಾಗಿದೆ ಈ ಆದೇಶವು ದಿನಾಂಕ: 01.12.2004 ರಿಂದ 30 ದಿವಸಗಳ ಒಳಗೆ ವಾಹನದ ಮಾಲಿಕರು ಮೇಲ್ಮನವಿ ಸಲ್ಲಿಸದೇ ಇದ್ದರೇ ಇದೇ ಅಂತಿಮ ಆದೇಶವಾಗಿರುತ್ತದೆ.

**ಸೀಮಾ ಗರ್ಗ್**
ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ.

**ಅನುಬಂಧ**

1. ಫಿರ್ಯಾದಿದಾರರ ಪರ ಸಾಕ್ಷಿಗಳ ವಿಚಾರಣೆ.
1. ಪಿಡಬ್ಲ್ಯೂ 1 ಶ್ರೀ ಚಂದ್ರಮೌಳಿ ಪ್ರಥಮ ದರ್ಜೆ ಸಹಾಯಕ ಸಿರಿಗೆರೆ ವಲಯ ಸಿರಿಗೆರೆ ಫಿರ್ಯಾದಿದಾರರ ಪರ ದಾಖಲಾತಿಗಳ ಪರಿಶೀಲನೆ.
   1. ಪಿ1 ಸ್ಥಳ ಮಹಜರ್
   2. ಪಿ1 ಎ ಪಿಡಬ್ಲ್ಯೂ 1 ಸಾಕ್ಷಿದಾರರ ಸಹಿ
   3. ಎಕ್ಸ್‌ಬಿಟ್ 2 ಮಧ್ಯಂತರ ಆದೇಶ ದಿನಾಂಕ:16.09.94 ಹಾಗೂ 31.08.96.
2. ಅರ್ಜಿದಾರರ ಪರ ದಾಖಲಾತಿಗಳ ಪರಿಶೀಲನೆ ಯಾವುದೂ ಇರುವುದಿಲ್ಲ.

**ಸೀಮಾ ಗರ್ಗ್**
ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್. 1763

**ಸಹಕಾರ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 204 ಸಿಎಸ್‌ಎಸ್ 2000, ಬೆಂಗಳೂರು, ದಿನಾಂಕ: 30ನೇ ನವೆಂಬರ್, 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 204 ಸಿಎಸ್‌ಎಸ್ 2000, ದಿನಾಂಕ: 04.08.2000ರಲ್ಲಿ ಚಾಮರಾಜನಗರ ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಗುಂಡ್ಲುಪೇಟೆ ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಬಿ. ಬಸವಯ್ಯ ಬಿನ್ ಬಸವಯ್ಯ ಕರಕಲ ಮಾದಹಳ್ಳಿರವರ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

ಪಿ.ಆರ್. 1764

**ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಬೆಂಗಳೂರು ಇವರ ನಡವಳಿಗಳು**

**ವಿಷಯ :** ಶ್ರೀ ಆರ್.ಟಿ ಮೇತ್ರಾನ್, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಬೆಳಗಾವಿ ಇವರ ಅನಧಿಕೃತ ಗೈರುಹಾಜರಿ.

**ಉಲ್ಲೇಖ :**
1. ಈ ಕಛೇರಿಯ ತಿಳುವಳಿಕೆ ಪತ್ರದ ಸಂಖ್ಯೆ: ಸಿ3(ಬಿ) ಶಿಸ್ತು:4:02-03 ದಿನಾಂಕ: 24.03.2003.
2. ಈ ಕಛೇರಿಯ ಆದೇಶ ಸಂಖ್ಯೆ: ಸಿ3(ಬಿ): ಶಿಸ್ತು:4: 2002-03, ದಿನಾಂಕ: 24.07.2003.
3. ರೇಷ್ಮೆ ಜಂಟಿ ನಿರ್ದೇಶಕರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ಪತ್ರದ ಸಂಖ್ಯೆ: ಸಿ1-ಮೇತ್ರಾ- ಗೈರು-150-2002-03 ದಿನಾಂಕ: 11.05.2004.
4. ತಿಳುವಳಿಕೆ ಪತ್ರದ ಸಂಖ್ಯೆ: ಸಿ3(ಬಿ): ಶಿಸ್ತು:4:2002-03 ದಿನಾಂಕ: 05.06.2004.

**ಪೀಠಿಕೆ:**

ಶ್ರೀ ಆರ್.ಬಿ. ಮೇತ್ರಾನ್, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಬೆಳಗಾವಿ ಆದ ಇವರು ಸದರಿ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:09.02.2001ರಿಂದ ಕಛೇರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಿಯಾಗಿದ್ದು ಇವರು ಕೆಲಸಕ್ಕೆ ಹಾಜರಾಗಲು ಇವರ ಮೇಲಾಧಿಕಾರಿಗಳು ನಿಯಮಾನುಸಾರ ನಡೆಸಿರುವ ಪ್ರಯತ್ನಗಳು ವಿಫಲವಾಗಿ ಇವರ ಅನಧಿಕೃತ ಗೈರುಹಾಜರಿ ಮುಂದುವರಿದಿರುವುದರಿಂದ ಇವರ ವಿರುದ್ಧ ಶಿಸ್ತು ಕ್ರಮ ಅನಿವಾರ್ಯವೆಂದು ರೇಷ್ಮೆ ಉಪನಿರ್ದೇಶಕರು, (ಜಿ.ಪಂ.) ಬೆಳಗಾವಿ ಇವರು ದಿನಾಂಕ:16.09.2002ರಂದು ಶಿಸ್ತು ಪ್ರಾಧಿಕಾರಕ್ಕೆ ಎಲ್ಲಾ ದಾಖಲಾತಿಗಳೊಂದಿಗೆ ವರದಿ ಮಾಡಿರುತ್ತಾರೆ. ರೇಷ್ಮೆ ಉಪನಿರ್ದೇಶಕರು, ಬೆಳಗಾವಿ ಇವರ ವರದಿಯನ್ನು ಗಮನಿಸಿ ಶ್ರೀ ಆರ್.ಬಿ. ಮೇತ್ರಾನ್, ರೇಷ್ಮೆ ಪ್ರದರ್ಶಕರು ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಶಿಸ್ತು ಪ್ರಾಧಿಕಾರವು ತೀರ್ಮಾನಿಸಿ ಉಲ್ಲೇಖ(1)ರಂತೆ ಆರೋಪ ಪಟ್ಟಿಯನ್ನು ತಿಳುವಳಿಕೆ ಪತ್ರದೊಂದಿಗೆ ಶ್ರೀ ಆರ್.ಟಿ. ಮೇತ್ರಾನ್, ರೇಷ್ಮೆ ಪ್ರದರ್ಶಕರು ಇವರಿಗೆ ಜಾರಿಗೊಳಿಸಲಾಯಿತು. ಶ್ರೀ ಆರ್.ಬಿ ಮೇತ್ರಾನ್, ರೇಷ್ಮೆ ಪ್ರದರ್ಶಕರು ಆರೋಪ ಪಟ್ಟಿಯನ್ನು ಸ್ವೀಕರಿಸಿರುತ್ತಾರೆ. ಆದರೆ ಆರೋಪದ ಮೇಲೆ ಲಿಖಿತ ಹೇಳಿಕೆಯನ್ನು ನಿಗದಿತ ಅವಧಿಯಲ್ಲಿ ನೀಡಿರುವುದಿಲ್ಲ. ಇವರ ವಿರುದ್ಧ ಮಾಡಲಾದ ಆರೋಪವು ಈ ಕೆಳಕಂಡಂತೆ ಇರುತ್ತದೆ.

**ಆರೋಪ**

ಶ್ರೀ ಆರ್.ಬಿ. ಮೇತ್ರಾನ್, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಬೆಳಗಾವಿ ಆದ ನೀವು ಬೆಳಗಾವಿಯ ಚಾಕಿ ಸಾಕಾಣಿಕಾ ಕೇಂದ್ರ, ಅರಳಕಟ್ಟೆಯ ಪ್ರಭಾರವನ್ನು ಸಹ ಹಸ್ತಾಂತರಿಸದೇ ಮೇಲಾಧಿಕಾರಿಗಳಿಂದ ರಜೆ ಮಂಜೂರಾತಿ ಪಡೆಯದೆ ದಿನಾಂಕ: 09.02.2001ರಿಂದ ಕೆಲಸಕ್ಕೆ ಗೈರು ಹಾಜರಿಯಾಗಿ ಇಲಾಖಾ ಕ್ಷೇತ್ರಮಟ್ಟದ ಕಾರ್ಯ ನಿರ್ವಹಣೆಗೆ ಧಕ್ಕೆಯನ್ನುಂಟು ಮಾಡಿ, 1966ರ ಕೆ.ಸಿ.ಎಸ್.(ಸಿ.ಸಿ.ಎ.) ನಿಯಮ 3ನ್ನು ಉಲ್ಲಂಘಿಸಿ ದುರ್ನಡತೆ ಎಸಗಿರುತ್ತೀರಿ.

ಶ್ರೀ ಆರ್.ಬಿ. ಮೇತ್ರಾನ್, ರೇಷ್ಮೆ ಪ್ರದರ್ಶಕರು, ಯಾವುದೇ ಹೇಳಿಕೆ ನೀಡದಿರುವುದನ್ನು ಗಮನಿಸಿ ಆರೋಪದ ಸತ್ಯಾಸತ್ಯತೆಯನ್ನು ಕಂಡುಹಿಡಿಯಲು ನಿರ್ಧರಿಸಿ ಉಲ್ಲೇಖ (2)ರಂತೆ ವಿಚಾರಣಾಧಿಕಾರಿಯವರನ್ನು ನೇಮಿಸಿ ಆದೇಶ ಹೊರಡಿಸಲಾಯಿತು. ವಿಚಾರಣಾಧಿಕಾರಿಯವರು ಸಿ.ಸಿ.ಎ. ನಿಯಮ (11) ರಡಿಯಲ್ಲಿ ನಿರ್ದಿಷ್ಟಪಡಿಸಿರುವ ಎಲ್ಲಾ ನಿಯಮಗಳಂತೆ ವಿಚಾರಣೆ ನಡೆಸಿರುತ್ತಾರೆ. ಒಟ್ಟು 5 ಬಾರಿ ನಡೆದ ವಿಚಾರಣೆಯ ಪ್ರಕ್ರಿಯೆಗೆ ಕೇವಲ 2 ಬಾರಿ ಮಾತ್ರ ಆರೋಪಿತ ನೌಕರರು ಹಾಜರಿಯಾಗಿರುತ್ತಾರೆ. ಆದರೆ ಆಪಾದಿತ ನೌಕರರು ತಮ್ಮ ಅಂತಿಮ ಲಿಖಿತ ವಾದವನ್ನು ಸಹ ವಿಚಾರಣಾಧಿಕಾರಿಯವರಿಗೆ ನೀಡಿಲ್ಲ. ವಿಚಾರಣೆಗೂ ಇವರು ಗೈರುಹಾಜರಿಯಾಗಿರುವುದರಿಂದ ವಿಚಾರಣೆಯನ್ನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11(2) ರನ್ವಯ ನಡೆಸಿದ್ದು, ದಾಖಲಾತಿಗಳು ಮತ್ತು ಸಾಕ್ಷಿಗಳ ಹೇಳಿಕೆಯನ್ನು ವಿಚಾರಣೆಯಲ್ಲಿ ಪಡೆಯಲಾಗಿದೆ.

ಶಿಸ್ತು ಪ್ರಾಧಿಕಾರವು ಶ್ರೀ ಆರ್.ಬಿ. ಮೇತ್ರಾನ್, ರೇಷ್ಮೆ ಪ್ರದರ್ಶಕರು, ಇವರ ವಿರುದ್ಧ ಮಾಡಲಾದ ಆರೋಪ, ಆರೋಪಕ್ಕೆ ಸಂಬಂಧಿಸಿದ ದಾಖಲೆ ಮತ್ತು ಸಾಕ್ಷಿಗಳ ಹೇಳಿಕೆಯನ್ನು ಗಮನಿಸಿದೆ. ಶ್ರೀ ಆರ್.ಬಿ. ಮೇತ್ರಾನ್, ರೇಷ್ಮೆ ಪ್ರದರ್ಶಕರು, ಇವರು ದಿನಾಂಕ: 24.03.2003ರಲ್ಲಿ ಸಲ್ಲಿಸಿರುವ ಆರೋಪಕ್ಕೂ ಯಾವುದೇ ಹೇಳಿಕೆ ನೀಡಲು ವಿಫಲರಾಗಿರುತ್ತಾರೆ. ಗೈರುಹಾಜರಿ ಕುರಿತಂತೆ ಮೇಲಾಧಿಕಾರಿಗಳು ಕಳುಹಿಸಿರುವ ಪತ್ರಗಳಿಗೆ ಯಾವುದೇ ರೀತಿಯಲ್ಲಿ ಸ್ಪಂದಿಸಿರುವುದಿಲ್ಲ. ಆರೋಪ ಕುರಿತಂತೆ ನಿಯಮಗಳ ಪ್ರಕಾರ ವಿಚಾರಣೆ ನಡೆಸಿದರೂ ವಿಚಾರಣೆಗೆ ಸರಿಯಾಗಿ ಹಾಜರಾಗಿಲ್ಲ ಹಾಗೂ ತಮ್ಮ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ವಿಚಾರಣಾಧಿಕಾರಿಯವರ ನಿರ್ಣಯದ ಮೇಲೆ ಲಿಖಿತ ಹೇಳಿಕೆ ಸಹ ನೀಡದೆ ಇರುವುದನ್ನು ಗಮನಿಸಿದಾಗ ಇವರು ಉದ್ದೇಶಪೂರ್ವಕವಾಗಿ ಕಛೇರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಿಯಾಗುತ್ತಿರುವುದು ದೃಢಪಡುತ್ತದೆ. ಇವರ ಈ ವರ್ತನೆಯು ಸರ್ಕಾರಿ ನೌಕರನಿಗೆ ಸಲ್ಲದ ರೀತಿಯದ್ದಾಗಿದ್ದು ಇವರಿಗೆ ಸರ್ಕಾರಿ ಕೆಲಸದಲ್ಲಿ ಯಾವುದೇ ಆಸಕ್ತಿ ಇಲ್ಲದಿರುವುದು ದೃಢಪಡುತ್ತದೆ. ಆದುದರಿಂದ ಇವರ ವಿರುದ್ಧ ಮಾಡಿರುವ ಅನಧಿಕೃತ ಗೈರು ಹಾಜರಿಯ ಆರೋಪವು ಸಾಬೀತಾಗಿರುವುದರಿಂದ ಇವರಿಗೆ ದಂಡನೆ ವಿಧಿಸಲು ನಿರ್ಧರಿಸಿ ಈ ಆದೇಶ.

**ಆದೇಶ ಸಂಖ್ಯೆ: ಸಿ3(ಬಿ): ಶಿಸ್ತು:4: 2002-03, ದಿನಾಂಕ: 27ನೇ ಜುಲೈ, 2004**

ಪೀಠಿಕೆಯಲ್ಲಿ ವಿವರಿಸಿರುವ ಅಂಶಗಳನ್ವಯ ಹಾಗೂ 1957ರ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 9 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಅರವಿಂದ ಜನ್ನು, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು: ಶಿಸ್ತು ಪ್ರಾಧಿಕಾರಿಗಳಾದ ನಾನು ಶ್ರೀ ಆರ್.ಬಿ. ಮೇತ್ರಾನ್, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಬೆಳಗಾಂ ಇವರನ್ನು ಸದರಿ ನಿಯಮ 8(vii)ರಲ್ಲಿ ನಿರ್ದಿಷ್ಟಪಡಿಸಿರುವಂತೆ ಸೇವೆಯಿಂದ ವಜಾ ಮಾಡಿ ಆದೇಶಿಸಿದ್ದೇನೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು
ಹಾಗೂ ರೇಷ್ಮೆ ನಿರ್ದೇಶಕರು, ಶಿಸ್ತು ಪ್ರಾಧಿಕಾರಿಗಳು.

ಪಿ.ಆರ್. 1765

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹಾಗೂ ವಸೂಲಿ ಅಧಿಕಾರಿ(ನಿ 441)**
**ತುಮಕೂರು ಪಟ್ಟಣ ಸಹಕಾರ ಬ್ಯಾಂಕ್ ನಿ., ತುಮಕೂರು ಇವರ ನಡವಳಿಕೆಗಳು**

**ವಿಷಯ :** ಸಿಇಪಿ ನಂ11/2002-03 ಶ್ರೀ ಎಸ್. ಕೃಷ್ಣ ಬಿನ್ ಟಿ.ಬಿ. ಸೀಬಿರಂಗಪ್ಪ ಇವರ ಸ್ಥಿರಾಸ್ತಿಯ ಹರಾಜು ಬಗ್ಗೆ ಮಾರಾಟ ಸ್ಥಿರೀಕರಣಗೊಳಿಸುವುದು.

**ಉಲ್ಲೇಖ :** ಮಾರಾಟಾಧಿಕಾರಿ, ಪಟ್ಟಣ ಸಹಕಾರ ಬ್ಯಾಂಕ್ ನಿ., ತುಮಕೂರು ಇವರ ಪತ್ರದ ಸಂಖ್ಯೆ: 211/2004-05 ದಿನಾಂಕ: 10.12.2004.

ಶ್ರೀ ಎಸ್. ಕೃಷ್ಣ ಬಿನ್ ಟಿ.ಬಿ. ಸೀಬಿರಂಗಪ್ಪ, ಭಾಗ್ಯನಗರ, ಬೆಳಗುಂಬ ಹತ್ತಿರ ತುಮಕೂರು ಇವರು ತುಮಕೂರು ಪಟ್ಟಣ ಸಹಕಾರ ಬ್ಯಾಂಕ್ ನಿ., ತುಮಕೂರು ಇದರಲ್ಲಿ 2001ರಲ್ಲಿ ರೂ.5.00 ಲಕ್ಷ ಸಾಲ ಪಡೆದಿದ್ದು, ಸದರಿ ಸಾಲವನ್ನು ಮರುಪಾವತಿ ಮಾಡದ ಪ್ರಯುಕ್ತ ಬ್ಯಾಂಕ್‌ನವರು ಕಾನೂನು ಕ್ರಮ ಜರುಗಿಸಿ ಡಿಕ್ರಿ ನಂ. 273/2002-2003ರ ಮೂಲಕ ಡಿಕ್ರಿ ಆದೇಶ ಪಡೆಯಲಾಗಿದೆ. ಈ ಡಿಕ್ರಿ ಆದೇಶವನ್ನು ಜಾರಿಗೊಳಿಸಲು ಅಮಲ್ಜಾರಿ ಆದೇಶ ಸಿ.ಇ.ಪಿ. ನಂ. 11/2002-03ರ ಮೂಲಕ ಡಿಕ್ರಿಯನ್ನು ಜಾರಿಗೊಳಿಸಲು ಅಮಲ್ಜಾರಿ ಆದೇಶ ಪಡೆಯಲಾಗಿದೆ ಸಾಲ ವಸೂಲಿ ಕುರಿತು ಬ್ಯಾಂಕಿಗೆ ಆಧಾರ ಮಾಡಿರುವ ಷೆಡ್ಯೂಲ್ ಸ್ಥಿರಾಸ್ತಿಯನ್ನು ಹರಾಜು ನಡೆಸುವ ಬಗ್ಗೆ ದಿನಾಂಕ: 18.05.2004ರಂದು ಹರಾಜು ದಿನಾಂಕ ನಿಗದಿಪಡಿಸಿ, ಸಾಲಗಾರರಿಗೆ ಫಾರಂ ನಂ.9 ನ್ನು ದಿನಾಂಕ: 15.04.2004ರಂದು ನೀಡಲಾಗಿ, ಸಾಲಗಾರರು "ಹಾಲಿ ವಿಳಾಸದಲ್ಲಿ ವಾಸವಾಗಿರುವುದಿಲ್ಲ" ಎಂಬ ಷರಾದೊಂದಿಗೆ ನೋಟೀಸ್ ವಾಪಸ್ಸು ಬಂದಿರುತ್ತದೆ. ಹರಾಜು ದಿನಾಂಕ: 15.04.2004 ರಂದು ನಡೆಸಲಾದ ಹರಾಜಿನಲ್ಲಿ ಬಿಡ್‌ದಾರರು ಯಾರು ಭಾಗವಹಿಸದ ಪ್ರಯುಕ್ತ ಹರಾಜು ಮುಂದೂಡಿರುತ್ತದೆ. ದಿನಾಂಕ: 20.11.2004ರಂದು ಮುಂದೂಡಿದ ಹರಾಜನ್ನು ನಡೆಸಲಾಗಿ ಟಾಂ ಟಾಂ ಮೂಲಕ ಮತ್ತು ಭಿತ್ತಿಪತ್ರ ಹಂಚುವ ಮೂಲಕ ವ್ಯಾಪಕ ಪ್ರಕಟಣೆ ನಡೆಸಿರುತ್ತೆ. ದಿನಾಂಕ: 20.11.2004ರ

ಬಹಿರಂಗ ಹರಾಜಿನಲ್ಲಿ ನಾಲ್ಕು ಜನರು ಭಾಗವಹಿಸಿದ್ದು, ಇದರಲ್ಲಿ ಶ್ರೀ ಎಸ್.ಎನ್. ಸೋಮಶೇಖರ ಬಿನ್ ಟಿ.ಎಲ್. ನಂಜುಂಡಪ್ಪ, ತುಮಕೂರು ಇವರು ರೂ. 4.50 ಲಕ್ಷ ಅತಿ ಹೆಚ್ಚಿನ ಮೊತ್ತಕ್ಕೆ ಬಿಡ್ ಕೂಗಿರುತ್ತಾರೆ. ಹಾಗೂ ಬಿಡ್ ಮೊಬಲಗಿನ ಪ್ರಾರಂಭಿಕ ಹಣ 67,500-00 ರೂ.ಗಳನ್ನು ಹರಾಜು ದಿನಾಂಕ: 20.11.2004ರಂದು ಪಾವತಿಸಿರುತ್ತಾರೆ. ಉಳಿದ ಬಿಡ್ ಮೊತ್ತ 3,82,500-00 ರೂ.ಗಳನ್ನು ದಿನಾಂಕ: 10.12.2004 ರಂದು ಪಾವತಿ ಮಾಡಿರುತ್ತಾರೆ. ಬ್ಯಾಂಕಿನ ಮಾರಾಟಾಧಿಕಾರಿಗಳು ತಮ್ಮ ಉಲ್ಲೇಖದ ಪತ್ರದಲ್ಲಿ ಸದರಿ ಹರಾಜನ್ನು ಸ್ಥಿರೀಕರಣಗೊಳಿಸಿ ಮಾರಾಟ ದೃಢೀಕರಣ ನೀಡಲು ಪ್ರಸ್ತಾವನೆ ಕಳುಹಿಸಿರುತ್ತಾರೆ.

ಸಾಲಗಾರನು ಹಾಲಿ ವಿಳಾಸದಲ್ಲಿ ವಾಸವಿಲ್ಲದ ಪ್ರಯುಕ್ತ ದಿನಾಂಕ: 22.11.2004ರಂದು ನೀಡಿರುವ ನೋಟೀಸು ಜಾರಿ ಆಗದೆ ವಾಪಸ್ ಬಂದಿರುತ್ತದೆ, ಡಿಕ್ರಿದಾರ ಬ್ಯಾಂಕಿಗೆ ಸಾಲಗಾರನಾಗಿದ್ದು ಹರಾಜು ದಿನಾಂಕಕ್ಕೆ ಅಸಲು ರೂ. 5,00,495-00 ಸೇರಿ ಒಟ್ಟು ಮೊತ್ತ ರೂ 7,70,855-00ಗಳು ಬಾಕಿಯಿದ್ದು, ಷೆಡ್ಯೂಲ್ ಸ್ಥಿರಾಸ್ತಿಯನ್ನು ರೂ. 4.50 ಲಕ್ಷಗಳಿಗಿಂತಲೂ ಹೆಚ್ಚಿನ ಮೊತ್ತಕ್ಕೆ ಮಾರಾಟ ಮಾಡುವ ಸಾಧ್ಯತೆಯಿಲ್ಲ ಎಂದು ಪ್ರಸ್ತಾವನೆಯಲ್ಲಿ ತಿಳಿಸಿರುವುದನ್ನು ಪರಿಗಣಿಸಿ ದಿನಾಂಕ: 20.11.2004ರಂದು ನಡೆಸಿದ ಬಹಿರಂಗ ಹರಾಜಿನಲ್ಲಿ ಶ್ರೀ ಎಸ್.ಎನ್. ಸೋಮಶೇಖರ್ ಬಿನ್ ಟಿ.ಎಲ್. ನಂಜುಂಡಪ್ಪ, ಶ್ರೀರಾಮನಗರ, ತುಮಕೂರು ಇವರಿಗೆ ಷೆಡ್ಯೂಲ್ ಸ್ಥಿರಾಸ್ತಿಯನ್ನು ರೂ. 4,50,000-00 (ನಾಲ್ಕು ಲಕ್ಷ ಐವತ್ತು ಸಾವಿರ) ರೂ.ಗಳಿಗೆ ಮಾರಾಟವಾಗಿರುವುದನ್ನು ಸ್ಥಿರೀಕರಣಗೊಳಿಸುವುದು ಸಮಂಜಸವೆಂದು ತೀರ್ಮಾನಕ್ಕೆ ಬಂದಿದ್ದು, ಈ ಕೆಳಕಂಡಂತೆ ಆದೇಶ ನೀಡಿರುತ್ತೇನೆ.

**ಆದೇಶ**

**ಸಂಖ್ಯೆ: ಸ.ನಿ. (ವ.ಅ.ನಿ.441) ತು.ಪ.ಸ. ಬ್ಯಾಂಕ್/ 01/2003-04, ದಿನಾಂಕ: 11ನೇ ಡಿಸೆಂಬರ್, 2004**

ಎಸ್.ಬಿ. ಮಲ್ಲಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿ (ನಿಯಮ 441) ತುಮಕೂರು ಪಟ್ಟಣ ಸಹಕಾರ ಬ್ಯಾಂಕ್ ನಿ., ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38ರನ್ವಯ ದತ್ತವಾದ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿ.ಎಂ.ಡಬ್ಲ್ಯೂ. 69 ಸಿ.ಎಲ್.ಎಂ. 2000 ದಿನಾಂಕ 21.11.2001ರನ್ವಯ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರವನ್ನು ಚಲಾಯಿಸಿ, ಮೇಲ್ಕಂಡ ಪೀಠಿಕೆಯಲ್ಲಿ ವಿವರಿಸಿರುವಂತೆ ಶ್ರೀ ಎಸ್. ಕೃಷ್ಣ ಬಿನ್ ಟಿ.ಬಿ. ಸೀಬಿರಂಗಪ್ಪ, ತುಮಕೂರು ಇವರ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ದಿನಾಂಕ: 20.11.2004ರಲ್ಲಿ ನಡೆದ ಬಹಿರಂಗ ಹರಾಜಿನಲ್ಲಿ ಶ್ರೀ ಎಸ್.ಎನ್. ಸೋಮಶೇಖರ ಬಿನ್ ಟಿ.ಎಲ್. ನಂಜುಂಡಪ್ಪ, 42 ವರ್ಷ ವಯಸ್ಸು, ಹೊಸಬಡಾವಣೆ ಶ್ರೀರಾಮನಗರ, ತುಮಕೂರು ಇವರು ರೂ. 4.50 ಲಕ್ಷ (ನಾಲ್ಕು ಲಕ್ಷ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಗಳಿಗೆ ಅಂತಿಮ ಬಿಡ್ ಮಾಡಿರುವುದನ್ನು ಒಪ್ಪಿ ಈ ಮಾರಾಟವನ್ನು ಸ್ಥಿರೀಕರಣಗೊಳಿಸಿ ಈ ಮೂಲಕ ಆದೇಶಿಸಿರುತ್ತೇನೆ. ರೂ. 4.50 ಲಕ್ಷಗಳನ್ನು ಸಾಲಗಾರನ ಸಾಲದ ಖಾತೆಗೆ ಹೊಂದಾಣಿಕೆ ಮಾಡಿಕೊಳ್ಳಲು ಡಿಕ್ರಿದಾರ ಬ್ಯಾಂಕಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ಆದೇಶಿಸಿರುತ್ತೇನೆ.

**ಷೆಡ್ಯೂಲ್ ಸ್ಥಿರಾಸ್ತಿ ತಪಸೀಲು**

ತುಮಕೂರು ನಗರ ಅಂತರಸನಹಳ್ಳಿ ಬಡಾವಣೆ ಮುನಿಸಿಪಲ್ ಖಾತೆ ನಂ. 462-1200 ಸೈಟ್ ನಂ. 47 ಮತ್ತು 48 ಆಗಿದ್ದು, ಇವುಗಳ ಅಳತೆ ತಲಾ 40x30 ಒಟ್ಟು ಅಳತೆ 60x40 ಅಡಿಗಳಾಗಿದ್ದು, ಇದರಲ್ಲಿರುವ ಕಟ್ಟಡ ಸೇರಿ ಚಕ್ಕುಬಂದಿ: ಪೂರ್ವಕ್ಕೆ- ಬೇರೆಯವರ ಸ್ವತ್ತು, ಪಶ್ಚಿಮಕ್ಕೆ-ರಸ್ತೆ, ಉತ್ತರಕ್ಕೆ-ಸೈಟ್ ನಂ. 46, ದಕ್ಷಿಣಕ್ಕೆ- ಸೈಟ್ ನಂ. 49 ಈ ಮಧ್ಯೆ ಇರುವ ಸ್ವತ್ತು.

ನನ್ನ ಸ್ವಹಸ್ತಾಕ್ಷರಗಳಲ್ಲಿ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 10.12.2004ರಂದು ನೀಡಿರುತ್ತೇನೆ.

**ಎಸ್.ಬಿ. ಮಲ್ಲಪ್ಪ**
ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಹಾಗೂ ವಸೂಲಿ ಅಧಿಕಾರಿ, ನಿಯಮ 441,
ತುಮಕೂರು ಪಟ್ಟಣ ಸಹಕಾರ ಬ್ಯಾಂಕ್ ನಿ., ತುಮಕೂರು.

ಪಿ.ಆರ್. 1766

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಆಕುಕ 122 ಹೆಚ್‌ಎಸ್‌ಹೆಚ್ 2004 (ಭಾಗ-2), ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್, 2004**

ವಿಶೇಷ ಆಯ್ಕೆ ಸಮಿತಿಯು ದಿನಾಂಕ: 12.12.2003 ರಂದು ಹೊರಡಿಸಿದ ಅಧಿಸೂಚನೆ ಸಂಖ್ಯೆ: ಡಿಆರ್‌ಸಿ/ 42/(1) 2003-04ರ ಪಟ್ಟಿಯಲ್ಲಿ ಆಯ್ಕೆಯಾದ ಪದವೀಧರ ವೈದ್ಯರನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ರೂ. 7400-200-8800-260-10880-320-13120 ಗಳ ವೇತನ ಶ್ರೇಣಿಯಲ್ಲಿ ಎರಡು ವರ್ಷಗಳ ಖಾಯಂ ಪೂರ್ವ ಸೇವಾವಧಿಯ ಮೇರೆಗೆ ಹಂಗಾಮಿಯಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಈ ಅಧಿಸೂಚನೆಗೆ ಲಗತ್ತಿಸಿದ ಅನುಬಂಧದಲ್ಲಿ ಸೂಚಿಸಿರುವಂತೆ ನೇಮಿಸಲಾಗಿದೆ.

1. ಈ ಉದ್ಯೋಗ ನೀಡಿಕೆಯು ಅಭ್ಯರ್ಥಿಯ ವೈದ್ಯಕೀಯ ದೃಢತೆ ಪ್ರಮಾಣ ಪತ್ರ, ಪೂರ್ವಾಪರ ನಡವಳಿಕೆ ಬಗ್ಗೆ ಪೊಲೀಸು ವರದಿ ಮತ್ತು ಜಾತಿ ಹಾಗೂ ಆದಾಯ ಸಿಂಧುತ್ವ ಪ್ರಮಾಣ ಪತ್ರ ತನಿಖೆಗೆ ಒಳಪಟ್ಟಿರುತ್ತದೆ.

2. ನೇಮಕಾತಿ ಹೊಂದಿದ ಅಭ್ಯರ್ಥಿಯು ಎರಡು ವರ್ಷಗಳ ಕಾಲ ಖಾಯಂ ಪೂರ್ವ ಸೇವಾವಧಿಯಲ್ಲಿ ಹುದ್ದೆಗೆ ನಿಗದಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು.

3. ಈ ಅಧಿಸೂಚನೆ ತಲುಪಿದ ತಕ್ಷಣ ಅಥವಾ ಈ ಅಧಿಸೂಚನೆಯನ್ನು ನೊಂದಣಿ ಅಂಚೆಯಲ್ಲಿ ಕಳುಹಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಅಭ್ಯರ್ಥಿಯು ನೇಮಕಾತಿ ಮಾಡಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗಬೇಕು. ಹಾಜರಾಗದಿದ್ದಲ್ಲಿ ನೇಮಕಾತಿಯು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 18(3) ರನ್ವಯ ಯಾವುದೇ ಸೂಚನೆ ಇಲ್ಲದೆ ರದ್ದಾಗುವುದು.

4. ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗುವಾಗ ಎಲ್ಲಾ ಮೂಲ ದಾಖಲೆಗಳನ್ನು ಅಂದರೆ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಗೊತ್ತುಪಡಿಸಿರುವ ವಿದ್ಯಾರ್ಹತೆಯ ಪ್ರಮಾಣ ಪತ್ರ, ಜನ್ಮ ದಿನಾಂಕದ ದಾಖಲೆ ಇತ್ಯಾದಿಗಳನ್ನು ಆಯಾ ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಅಧಿಕಾರಿ: ಜಿಲ್ಲಾ ಸರ್ಜನ್‌ಗಳ ಮುಂದೆ ಹಾಜರುಪಡಿಸಿ, ಅವರಿಂದ ಚಲನಾದೇಶವನ್ನು ಪಡೆದು ನೇಮಿಸಿರುವ ಸ್ಥಳದಲ್ಲಿ ಕೆಲಸಕ್ಕೆ ಹಾಜರಾಗತಕ್ಕದ್ದು.

5. ಕ್ರಮ ಸಂಖ್ಯೆ: 3, 5, 9, 10, 12, 13, 14, 15, 16,17, 18, 19, 20, 21, 22, 23, 25, 26, 27, 30, 31, 32, 33, 34, 35, 36, 37, 38, 39, 40, 41, 42, 43, 44 ಹಾಗೂ 46ರಲ್ಲಿನ ಅಭ್ಯರ್ಥಿಗಳು ಮೀಸಲಾತಿ ಆಧಾರದಲ್ಲಿ ಆಯ್ಕೆಯಾಗಿದ್ದು ಅವರುಗಳಿಗೆ

ಸಂಬಂಧಿಸಿದಂತೆ ಸಿಂಧುತ್ವ ಪ್ರಮಾಣ ಪತ್ರವು ಸರ್ಕಾರಕ್ಕೆ ಸಕಾಲದಲ್ಲಿ ತಲುಪದಿರುವುದರಿಂದ ಸದರಿ ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಸಂಬಂಧಪಟ್ಟ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಮುಂದೆ ತಮ್ಮ ಆಯ್ಕೆಗೆ ಸಂಬಂಧಪಟ್ಟಂತೆ ಸಿಂಧುತ್ವ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಲ್ಲಿಸತಕ್ಕದ್ದು, ಇಲ್ಲದಿದ್ದಲ್ಲಿ ನೇಮಕಾತಿ ಆದೇಶವು ರದ್ದುಗೊಳ್ಳುತ್ತದೆ.

6. ಅಭ್ಯರ್ಥಿಯು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡವಳಿಕೆ ಪ್ರಮಾಣ ಪತ್ರವನ್ನು ಪಡೆದು ಕೆಲಸಕ್ಕೆ ಹಾಜರಾಗುವ ಸಮಯದಲ್ಲಿ ಹಾಜರುಪಡಿಸಬೇಕು.

7. ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿರುವ ಅಭ್ಯರ್ಥಿಗಳಿಗೆ ಸ್ನಾತಕೋತ್ತರ ವ್ಯಾಸಂಗವನ್ನು ಮುಂದುವರಿಸಲು ಅವಕಾಶವಿರುವುದಿಲ್ಲ.

ಅಭ್ಯರ್ಥಿಯ ಜೇಷ್ಠತೆಯು ವಿಶೇಷ ಆಯ್ಕೆ ಸಮಿತಿಯು ನೀಡಿರುವ ಆಯ್ಕೆ ಪಟ್ಟಿಯ ಕ್ರಮಾಂಕದಂತೆ ಇರುತ್ತದೆ.

ನೇಮಕಾತಿ ಮಾಡಿರುವ ಸ್ಥಳದ ಮಾರ್ಪಾಡಿಗಾಗಿ ಅಥವಾ ರದ್ಧತಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.

ನೇಮಕಾತಿ ಮಾಡಿರುವ ಸ್ಥಳದಲ್ಲಿ ಯಾವುದೇ ಕಾರಣಕ್ಕಾಗಲೀ ಹುದ್ದೆ ಖಾಲಿ ಇಲ್ಲದಿದ್ದ ಪಕ್ಷದಲ್ಲಿ ಸದರಿ ಅಭ್ಯರ್ಥಿಗಳನ್ನು ನೇಮಕಾತಿ ಮಾಡಿರುವ ಜಿಲ್ಲೆಯ ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಯವರೊಂದಿಗೆ ಸಮಾಲೋಚಿಸಿ, ಆ ಜಿಲ್ಲೆಯಲ್ಲಿಯೇ ಖಾಲಿ ಇರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಬದಲಿ ನೇಮಕಾತಿ ಆದೇಶ ನೀಡಲು ಅಧಿಕಾರ ನೀಡಲಾಗಿದೆ. ಇಂತಹ ಪ್ರಕರಣಗಳಲ್ಲಿ ಕೈಗೊಂಡ ಕ್ರಮದ ಕುರಿತು ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

**ಸಿ.ಎಸ್. ಜಗದೀಶಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 122 ಹೆಚ್ಎಸ್ಹೆಚ್ 2004 (ಭಾಗ-2), ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್, 2004ಕ್ಕೆ ಅನುಬಂಧ**

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಮೀಸಲಾತಿ ವರ್ಗ | ಜನ್ಮ ದಿನಾಂಕ | ನೇಮಕಾತಿ ಮಾಡಿರುವ ಸ್ಥಳ |
|---|---|---|---|---|
| 1. | ಡಾ: ಅನಿತ ಬಿ.ಎನ್. 405, 5ನೇ ಮುಖ್ಯ ರಸ್ತೆ, 12ನೇ ಅಡ್ಡರಸ್ತೆ, ಪಶ್ಚಿಮ ಕಾರ್ಡ್ ರಸ್ತೆ, 2ನೇ ಹಂತ, ಬೆಂಗಳೂರು-86. | ಜಿಎಂ (ಎಫ್) | 23.05.1971 | ಸಾರ್ವಜನಿಕ ಆಸ್ಪತ್ರೆ, ಮುಳಬಾಗಿಲು, ಕೋಲಾರ ಜಿಲ್ಲೆ. |
| 2. | ಡಾ: ರಾಜು ಎಲ್.ಎನ್. 451, 7ನೇ ಅಡ್ಡರಸ್ತೆ, 2ನೇ ಬ್ಲಾಕ್, ಆರ್.ಟಿ.ನಗರ, ಬೆಂಗಳೂರು-560032. | ಸಿ-I (ಜಿ) | 17.08.1970 | ಸ.ಆ.ಕೇಂದ್ರ, ನಿಂಬರ್ಗ, ಗುಲ್ಬರ್ಗಾ ಜಿಲ್ಲೆ. |
| 3. | ಡಾ: ಶಶಿಕುಮಾರ್ ಎಸ್. 92, 22ನೇ ಮುಖ್ಯರಸ್ತೆ, 12ನೇ ಎ. ಅಡ್ಡರಸ್ತೆ, ರಾಘವೇಂದ್ರ ಲೇಔಟ್, ಪದ್ಮನಾಭನಗರ, ಬೆಂಗಳೂರು-70. | ಸಿ-III (ಎ)(ಜಿ) | 12.07.1974 | ಸ.ಆ. ಕೇಂದ್ರ, ಕಾಳಗಿ, ಗುಲ್ಬರ್ಗಾ ಜಿಲ್ಲೆ. |
| 4. | ಡಾ: ಹಂಸ ಬಿ.ಆರ್. 977, ಸರ್ವಿಸ್ ರಸ್ತೆ, ಆರ್‌ಪಿಸಿ ಲೇಔಟ್, ವಿಜಯನಗರ 2ನೇ ಹಂತ, ಬೆಂಗಳೂರು-560040. | ಜಿಎಂ (ಎಫ್) | 05.11.1974 | ಪ್ರಾ.ಆ.ಕೇಂದ್ರ, ಸುಗಟೂರು, ಕೋಲಾರ ಜಿಲ್ಲೆ. |
| 5. | ಡಾ: ಶೈಲೇಶ್ ಕುಮಾರ್ ಕೆ.ಎನ್. ಯಶೋದಮ್ಮ ನಿಲಯ, ಸುಭಾಶ್‌ನಗರ, 1ನೇ ಮುಖ್ಯರಸ್ತೆ, 1ನೇ ಅಡ್ಡರಸ್ತೆ, ಪಾಂಡೇಶ್ವರ, ಮಂಗಳೂರು-1. | ಎಸ್‌ಸಿ (ಜಿ) | 09.05.1975 | ಜಿಲ್ಲಾ ಆಸ್ಪತ್ರೆ, ಬೀದರ್. |
| 6. | ಡಾ: ಸವಿತ ಕಾಮತ್ ಕಾಮಾಕ್ಷಿ ಆಟೋ ಸರ್ವಿಸ್, ಇಂಡಿಯನ್ ಆಯಿಲ್ ಡೀಲರ್ಸ್, ಭಟ್ಕಳ, ದಕ್ಷಿಣ ಕನ್ನಡ ಜಿಲ್ಲೆ-581320. | ಜಿಎಂ (ಎಫ್) | 01.06.1971 | ಸಾರ್ವಜನಿಕ ಆಸ್ಪತ್ರೆ, ಕುಂದಾಪುರ, ಉಡುಪಿ ಜಿಲ್ಲೆ. |
| 7. | ಡಾ: ತೇಜೋಮಣಿ ಎಂ. 497, 11ನೇ ಅಡ್ಡರಸ್ತೆ, 8ನೇ ಮುಖ್ಯರಸ್ತೆ, ಜೆ.ಪಿ.ನಗರ, 2ನೇ ಹಂತ, ಬೆಂಗಳೂರು-78. | ಜಿಎಂ (ಎಫ್) | 10.01.1972 | ಪ್ರಾ.ಆ.ಕೇಂದ್ರ, ಆವಣಿ, ಕೋಲಾರ ಜಿಲ್ಲೆ. |

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಮೀಸಲಾತಿ ವರ್ಗ | ಜನ್ಮ ದಿನಾಂಕ | ನೇಮಕಾತಿ ಮಾಡಿರುವ ಸ್ಥಳ |
|---|---|---|---|---|
| 8. | ಡಾ: ಭೈರವಾಡಗಿ ವಿ.ವಿ. ಕೇರಾಫ್, ಬಿ.ಎಸ್. ಇಜೇರಿ, ಅಶ್ವಿನಿ ಕೃಪ, 246, 2ನೇ ಫೇಸ್, ಚಬುಕಸಾಹೀಬ್ ದರ್ಗ ಹತ್ತಿರ, ಗಂಜಿಕಟ್ಟಿ ಕಾಲೋನಿ, ಬಿಜಾಪುರ ಜಿಲ್ಲೆ-586103. | ಸಿ-III (ಎ)(ಜಿ) | 01.06.1973 | ಪ್ರಾ.ಆ.ಕೇಂದ್ರ, ಹಿರೇಸಾವಳಗಿ, ಗುಲ್ಬರ್ಗಾ ತಾಲ್ಲೂಕು ಮತ್ತು ಜಿಲ್ಲೆ. |
| 9. | ಡಾ: ರಮೇಶ್ ಕೆ.ಟಿ. ತಂದೆ: ತಮ್ಮಣ್ಣಗೌಡ, ಕುಂಚಿಕೊಪ್ಪಲು, ದೊಡ್ಡ ಕುಂಚಿ ಅಂಚೆ, ಹೊಳೆನರಸೀಪುರ, ಹಾಸನ ಜಿಲ್ಲೆ. | ಸಿ-II (ಎ)(ಜಿ) | 10.07.1974 | ಸ.ಆ.ಕೇಂದ್ರ, ಹೆಬ್ಬಾಳ್, ಚಿತ್ತಾಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. |
| 10. | ಡಾ: ಗಿರೀಶ್ ಮಹಂತಯ್ಯ ಸ್ವಾಮಿ, 4-601/ 15ಸಿ, 1ನೇ ಅಡ್ಡರಸ್ತೆ, ಎಂ.ಬಿ. ಕಾಲೋನಿ, ಗುಲ್ಬರ್ಗಾ ಜಿಲ್ಲೆ-585105. | ಸಿ-III (ಬಿ)(ಜಿ) | 29.03.1973 | ಸಾರ್ವಜನಿಕ ಆಸ್ಪತ್ರೆ, ಆಳಂದ್, ಗುಲ್ಬರ್ಗಾ ಜಿಲ್ಲೆ. |
| 11. | ಡಾ: ಸವಿತಾದೇವಿ ಎಸ್.ಎಂ. 1985/1, 2ನೇ ಅಡ್ಡರಸ್ತೆ, ಎಂಸಿಸಿ ಎ ಬ್ಲಾಕ್, ದಾವಣಗೆರೆ ಜಿಲ್ಲೆ. | ಜಿಎಂ (ಎಫ್) | 01.05.1974 | ಪ್ರಾ.ಆ.ಕೇಂದ್ರ, ತ್ಯಾವಣಗಿ, ದಾವಣಗೆರೆ ಜಿಲ್ಲೆ. |
| 12. | ಡಾ: ರಾಜೇಶ್ ಕೆ.ಕೆ. 63, ಅಶ್ವತ್‌ನಗರ, ಎಂಎಸ್ ರಾಮಯ್ಯ ಆಸ್ಪತ್ರೆ ರಸ್ತೆ, 3ನೇ ಅಡ್ಡರಸ್ತೆ, ಆರ್‌ಎಂವಿ 2ನೇ ಹಂತ, ಬೆಂಗಳೂರು-560094. | ಸಿ-III (ಎ)(ಜಿ) | 21.01.1971 | ಪ್ರಾ.ಆ.ಕೇಂದ್ರ, ಜಾಲಹಳ್ಳಿ, ದೇವದುರ್ಗ ತಾಲ್ಲೂಕು, ರಾಯಚೂರು ಜಿಲ್ಲೆ. |
| 13. | ಡಾ: ದೀಪಕ್ ಆರ್. 158-ಇ, 3ನೇ ಹಂತ, 3ನೇ ವಿಭಾಗ, 4ನೇ ಮುಖ್ಯರಸ್ತೆ, ಬಸವೇಶ್ವರನಗರ, ಬೆಂಗಳೂರು-560079. | ಸಿ-II (ಎ)(ಜಿ) | 11.03.1972 | ಸಾರ್ವಜನಿಕ ಆಸ್ಪತ್ರೆ, ಮಾನ್ವಿ, ರಾಯಚೂರು ಜಿಲ್ಲೆ. |
| 14. | ಡಾ: ನಾಗರಾಜ್ ಆರ್.ಎಸ್. 379/1 ಕೆ.ಆರ್. ಪುರಂ ಬಡಾವಣೆ, ಬೆಂಗಳೂರು-36. | ಸಿ-III (ಎ)(ಜಿ) | 11.12.1966 | ಪ್ರಾ.ಆ.ಕೇಂದ್ರ, ಗಬ್ಬೂರು, ದೇವದುರ್ಗ ತಾಲ್ಲೂಕು, ರಾಯಚೂರು ಜಿಲ್ಲೆ. |
| 15. | ಡಾ: ನಾಗೇಶ ಎ. 1086, 16ನೇ ಅಡ್ಡರಸ್ತೆ, 30ನೇ ಮುಖ್ಯರಸ್ತೆ, ಬನಶಂಕರಿ 2ನೇ ಹಂತ, ಬೆಂಗಳೂರು-70. | ಎಸ್‌ಸಿ (ಜಿ) | 01.07.1972 | ಸಾರ್ವಜನಿಕ ಆಸ್ಪತ್ರೆ, ಮಾನ್ವಿ, ರಾಯಚೂರು ಜಿಲ್ಲೆ. |
| 16. | ಡಾ: ಉಪ್ಪಿನ್ ಎಂ.ಬಿ. 3904, ಗರಡಿಬೀದಿ, ಗುರುವಾಪೇಟ್, ಗೋಕಾಕ್, ಬೆಳಗಾಂ ಜಿಲ್ಲೆ-591307. | ಸಿ-III (ಬಿ)(ಜಿ) | 22.07.1973 | ಸಾರ್ವಜನಿಕ ಆಸ್ಪತ್ರೆ, ಜೇವರ್ಗಿ, ಗುಲ್ಬರ್ಗಾ ಜಿಲ್ಲೆ. |
| 17. | ಡಾ: ಸುನೀಲ್‌ಕುಮಾರ್ ಬಿ. ಮಿಣಜಗಿ, 708, 1ನೇ ಮುಖ್ಯರಸ್ತೆ, 4ನೇ ಅಡ್ಡರಸ್ತೆ, ಮತ್ತಿಕೆರೆ, ಬೆಂಗಳೂರು-54. | ಸಿ-I (ಜಿ) | 26.07.1975 | ಸಾರ್ವಜನಿಕ ಆಸ್ಪತ್ರೆ, ದೇವದುರ್ಗ, ರಾಯಚೂರು ಜಿಲ್ಲೆ. |
| 18. | ಡಾ: ಚಂದ್ರಿಕಾ ಕೆ.ಎಂ. 976, 17ನೇ ಮುಖ್ಯರಸ್ತೆ, 7ನೇ ಅಡ್ಡರಸ್ತೆ ಬಿಟಿಎಂ (ಮೈಕೋ) 2ನೇ ಹಂತ, ಬೆಂಗಳೂರು-76. | ಸಿ-II (ಎ)(ಜಿ) | 26.02.1974 | ಪ್ರಾ.ಆ.ಕೇಂದ್ರ, ತುರುವೇಕೆರೆ, ತುಮಕೂರು ಜಿಲ್ಲೆ. |
| 19. | ಡಾ: ಸುಧಾ ಸಿ.ಆರ್. ಕೇ: ಶ್ರೀಮತಿ ಸುಲೋಚನಾ 10, ಹಳೆ ಸಂಖ್ಯೆ: 74, 2ನೇ ಅಡ್ಡರಸ್ತೆ, ಬಾಲಾಜಿ ಏಜೆನ್ಸಿ ಎದುರು, ನಾಗಪ್ಪ ಬ್ಲಾಕ್, ಶ್ರೀರಾಂಪುರ, ಬೆಂಗಳೂರು-21. | ಸಿ-III (ಎ)(ಎಫ್) | 01.08.1975 | ಪ್ರಾ.ಆ.ಕೇಂದ್ರ, ಅಮೃತೂರು, ತುಮಕೂರು ಜಿಲ್ಲೆ. |
| 20. | ಡಾ: ರಾಕೇಶ್ ಎಸ್. ಬಜ್ವೆ 1426, ಸಿ ಮತ್ತು ಡಿ ಬ್ಲಾಕ್, ಕುವೆಂಪು ನಗರ, ಮೈಸೂರು-23. | ಎಸ್‌ಸಿ (ಜಿ) | 08.09.1967 | ಸಾರ್ವಜನಿಕ ಆಸ್ಪತ್ರೆ, ಹಡಗಲಿ, ಬಳ್ಳಾರಿ ಜಿಲ್ಲೆ. |
| 21. | ಡಾ: ರಮೇಶ್ ಬಾಬು ಎಸ್. ಎನ್‌ಜಿಒ ಕ್ಲಬ್ ಪಕ್ಕ, ಕೋಟೆ, ಚನ್ನರಾಯಪಟ್ಟಣ, ಹಾಸನ ಜಿಲ್ಲೆ. | ಸಿ-II (ಎ)(ಜಿ) | 05.03.1972 | ಸ.ಆ. ಕೇಂದ್ರ, ಮದನಹಿಪ್ಪರಗ, ಆಳಂದ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. |

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಮೀಸಲಾತಿ ವರ್ಗ | ಜನ್ಮ ದಿನಾಂಕ | ನೇಮಕಾತಿ ಮಾಡಿರುವ ಸ್ಥಳ |
|---|---|---|---|---|
| 22. | ಡಾ: ವಿಶ್ವನಾಥ್<br>ಕೇ: ಕೋಟ್ನರ್, ನಂ.47, ಕ್ಯಾನ್ಸರ್ ಆಸ್ಪತ್ರೆ, ಕಾಂಪೌಂಡ್, ನವನಗರ, ಹುಬ್ಬಳ್ಳಿ, ಧಾರವಾಡ ಜಿಲ್ಲೆ-580025. | ಎಸ್‌ಜಿ (ಜಿ) | 10.08.1971 | ಸ.ಆ.ಕೇಂದ್ರ, ಗುರುಮಿಟ್ಕಲ್, ಗುಲ್ಬರ್ಗಾ ಜಿಲ್ಲೆ. |
| 23. | ಡಾ: ಯೋಗೇಶ್ ಬಾಬು ಕೆ.ವಿ.<br>102, ಹಳೇ ವಸ್ತುಪ್ರದರ್ಶನ ಕಟ್ಟಡ ಜಿಎಂಸಿ, ಮೈಸೂರು. | ಸಿ-II (ಎ)(ಜಿ) | 01.05.1973 | ಪ್ರಾ.ಆ.ಕೇಂದ್ರ, ಇಜೇರಿ, ಜೇವರ್ಗಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. |
| 24. | ಡಾ: ಮಹೇಶ್‌ಕುಮಾರ್ ಆರ್.<br>104, ಇ. 16ನೇ ಮುಖ್ಯರಸ್ತೆ, ಐ ಅಂಡ್ ಸಿ ಬಡಾವಣೆ, ವಿಜಯನಗರ, ಬೆಂಗಳೂರು-40. | ಸಿ-II (ಎ)(ಜಿ) | 20.06.1971 | ಸ.ಆ.ಕೇಂದ್ರ, ಶೋರಾಪುರ್, ಗುಲ್ಬರ್ಗಾ ಜಿಲ್ಲೆ. |
| 25. | ಡಾ: ಸರಸ್ವತಿ ಜಯಂತಿ ಆರ್.<br>ಪಡುವ ನಿವಾಸ್, 534/2, 10ನೇ ಎ. ಅಡ್ಡರಸ್ತೆ, ಈಜಿಪುರ ಮುಖ್ಯರಸ್ತೆ, ವಿವೇಕನಗರ, ಬೆಂಗಳೂರು-47. | ಎಸ್‌ಸಿ (ಜಿ) | 22.08.1971 | ಪ್ರಾ.ಆ.ಕೇಂದ್ರ, ಬರಗೂರು, ತುಮಕೂರು ಜಿಲ್ಲೆ. |
| 26. | ಡಾ: ಭಾರತಿ ಎಂ.ಆರ್.<br>3, 24 ನೇ ಎ. ಮುಖ್ಯರಸ್ತೆ, ಕರೇಸಂದ್ರ, ಬನಶಂಕರಿ, 2ನೇ ಹಂತ, ಬೆಂಗಳೂರು-70. | ಸಿ-I (ಜಿ) | 26.02.1974 | ಸ.ಆ.ಕೇಂದ್ರ, ಬಟ್ಲಹಳ್ಳಿ, ಕೋಲಾರ ಜಿಲ್ಲೆ. |
| 27. | ಡಾ: ಉಮಾ ಶಂಕರ್ ಸಿ.<br>ಇಎಸ್‌ಐ ಚಿಕಿತ್ಸಾಲಯ, ರಾಬರ್ಟ್‌ಸನ್ ಪೇಟೆ, ಕೆ.ಜಿ.ಎಫ್., ಕೋಲಾರ-563122. | ಎಸ್‌ಜಿ (ಜಿ) | 21.10.1962 | ಪ್ರಾ.ಆ.ಕೇಂದ್ರ, ನೆಲೋಗಿ, ಜೇವರ್ಗಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. |
| 28. | ಡಾ: ರಾಧಾ ಟಿ.<br>9. ಗಂಗೋತ್ರಿ, 1ನೇ ಅಡ್ಡರಸ್ತೆ, ಕೃಷ್ಣ ದೇವಸ್ಥಾನದ ರಸ್ತೆ, 1ನೇ ಬ್ಲಾಕ್, ದೊಡ್ಡಬೊಮ್ಮಸಂದ್ರ, ವಿದ್ಯಾರಣ್ಯ ಪುರ ಅಂಚೆ, ಬೆಂಗಳೂರು-97. | ಸಿ-I (ಜಿ) | 09.11.1970 | ಪ್ರಾ.ಆ.ಕೇಂದ್ರ, ನಂಬಿಹಳ್ಳಿ, ಕೋಲಾರ ಜಿಲ್ಲೆ. |
| 29. | ಡಾ: ಶ್ರೀಕಾಂತ್ ಎಲ್.ಕೆ.<br>ಪ್ರಾ.ಆ.ಕೇಂದ್ರ, ನಾಪೋಕ್ಲು, ಮಡಿಕೇರಿ ತಾಲ್ಲೂಕು, ಕೊಡಗು ಜಿಲ್ಲೆ-571214. | ಸಿ-II (ಎ)(ಜಿ) | 14.11.1973 | ಪ್ರಾ.ಆ.ಕೇಂದ್ರ, ಬೆಳಗೊಳ, ಮಂಡ್ಯ ಜಿಲ್ಲೆ. |
| 30. | ಡಾ: ನೌಷಾದ್ ಆಲಿ ಎನ್. ಮಾಳಗಿ<br>ತಂದೆ: ಎನ್.ಡಿ. ಮಾಳಗಿ, ಕೌಸರ್ ಮಂಜಿಲ್, ನೆಹರೂನಗರ, ಕೆಎಸ್‌ಆರ್‌ಟಿಸಿ ಅತಿಥಿ ಗೃಹದ, ಹಿಂಭಾಗ, ಬಿಜಾಪುರ ಜಿಲ್ಲೆ-586101. | ಸಿ-II (ಬಿ)(ಜಿ) | 21.02.1974 | ಸಾರ್ವಜನಿಕ ಆಸ್ಪತ್ರೆ, ಸಿಂಧಗಿ, ಬಿಜಾಪುರ ಜಿಲ್ಲೆ. |
| 31. | ಡಾ: ಅಂಬಿಕಾವತಿ ಎಂ.<br>ಕೇ: ಡಾ: ಎಸ್. ಕುಮಾರ್, ಹಟ್ಟಿ ಚಿನ್ನದಗಣಿ ಆಸ್ಪತ್ರೆ, ಲಿಂಗಸುಗೂರು, ರಾಯಚೂರು ಜಿಲ್ಲೆ. | ಎಸ್‌ಜಿ (ಜಿ) | 24.06.1967 | ಪ್ರಾ.ಆ.ಕೇಂದ್ರ, ಪಾಪಾರಾವ್ ಕ್ಯಾಂಪ್, ರಾಯಚೂರು ಜಿಲ್ಲೆ. |
| 32. | ಡಾ: ಕವಿತಾ ಎಲ್. ತುಂಬಾಡಿ<br>ಪತಿ: ಡಾ: ಬಸವರಾಜು ಎಂ.<br>3, 1ನೇ ಮಹಡಿ, ವೈದ್ಯಾಧಿಕಾರಿಗಳ ಕ್ವಾರ್ಟರ್ಸ್, ಸಾರ್ವಜನಿಕ ಆಸ್ಪತ್ರೆ, ಚನ್ನಪಟ್ಟಣ-571501. | ಸಿ-I ಎಫ್ | 04.02.1974 | ಪ್ರಾ.ಆ.ಕೇಂದ್ರ, ವೈ.ಟಿ. ಹಳ್ಳಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ. |
| 33. | ಡಾ: ವೇದಾವತಿ ಹೆಚ್.<br>ತಂದೆ: ಡಾ: ವೆಂಕಟರಾಮಯ್ಯ ಟಿ. ಡಿಎಂಒ. ರೈಲ್ವೆ ಆರೋಗ್ಯ ಘಟಕ, ರೈಲು ನಿಲ್ದಾಣ, ಬಳ್ಳಾರಿ ಜಿಲ್ಲೆ-583101. | ಎಸ್‌ಸಿ (ಜಿ) | 20.07.1972 | ಪ್ರಾ.ಆ.ಕೇಂದ್ರ, ನಾಗತಿ ಬಸಾಪುರ, ಬಳ್ಳಾರಿ ಜಿಲ್ಲೆ. |
| 34. | ಡಾ: ನಾರಾಯಣ್ ಎಂ.<br>299, ಸೀಗೇಹಳ್ಳಿ ಗಲ್ಲಿ ಹತ್ತಿರ, ಕನ್ನಮಂಗಲ ಅಂಚೆ, ವಯಾ: ಕಾಡುಗೋಡಿ, ಬೆಂಗಳೂರು-67. | ಸಿ-II (ಎ)(ಜಿ) | 06.08.1969 | ಸ.ಆ.ಕೇಂದ್ರ, ಮುಧೋಳ್, ಸೇಡಂ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. |
| 35. | ಡಾ: ಶ್ರೀಶೈಲ್ ಜಿ.ಜೆ.<br>ರಾಘವೇಂದ್ರ ದೇವಸ್ಥಾನದ ಹತ್ತಿರ, ಹುಲಿಯಾಳ್ಕರ್ ಗಲ್ಲಿ, ಜಮಖಂಡಿ, ಬಾಗಲಕೋಟೆ ಜಿಲ್ಲೆ-581301. | ಸಿ-II (ಎ)(ಜಿ) | 28.07.1972 | ಸ.ಆ.ಕೇಂದ್ರ, ಚಿತ್ತಾಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. |

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಮೀಸಲಾತಿ ವರ್ಗ | ಜನ್ಮ ದಿನಾಂಕ | ನೇಮಕಾತಿ ಮಾಡಿರುವ ಸ್ಥಳ |
|---|---|---|---|---|
| 36. | ಡಾ: ಪರ್ವೇಜ್ ಅಹ್ಮದ್ ಪಿ. 14,12ನೇ ಮುಖ್ಯ ರಸ್ತೆ, 1ನೇ ಹಂತ, ನಾಗರಬಾವಿ, ಮುಖ್ಯರಸ್ತೆ, ಎ.ಸಿ. ಅಂಚೆ, ಬೆಂಗಳೂರು-45. | ಸಿ-II (ಬಿ)(ಜಿ) | 12.02.1973 | ಸಾರ್ವಜನಿಕ ಆಸ್ಪತ್ರೆ, ಅಫ್ಜಲ್‌ಪುರ, ಗುಲ್ಬರ್ಗಾ ಜಿಲ್ಲೆ. |
| 37. | ಡಾ: ಮೊಹ್ಮದ್ ಸೈಯದ್ ಅಹ್ಮದ್ 4146/ಎ, ಬಡಾವಣೆ, 7ನೇ ಅಡ್ಡರಸ್ತೆ, ಆರೋಗ್ಯ ಕೇಂದ್ರದ ಹತ್ತಿರ ರಾಮನಗರ, ಬೆಂಗಳೂರು ಗ್ರಾಮಾಂತರ ಜಿಲ್ಲೆ-571511. | ಸಿ-II (ಬಿ)(ಜಿ) | 07.09.1972 | ಪ್ರಾ.ಆ.ಕೇಂದ್ರ, ಹಿಟ್ನಾಳ್, ಕೊಪ್ಪಳ ಜಿಲ್ಲೆ. |
| 38. | ಡಾ: ವಾಣಿಶ್ರೀ ಎನ್. 788/ಸಿ, 1ನೇ ಅಡ್ಡರಸ್ತೆ, 1ನೇ ಮುಖ್ಯರಸ್ತೆ, ಮಹಾಲಕ್ಷ್ಮಿ ಬಡಾವಣೆ, ಬೆಂಗಳೂರು-86. | ಎಸ್‌ಸಿ (ಎಫ್) | 14.08.1974 | ಸಾರ್ವಜನಿಕ ಆಸ್ಪತ್ರೆ, ಬಂಗಾರಪೇಟೆ, ಕೋಲಾರ ಜಿಲ್ಲೆ. |
| 39. | ಡಾ: ಸಂಧ್ಯಾರಾಣಿ ಆರ್. 2827, ನಿಹಾಲ್, 4ನೇ ಮುಖ್ಯ ರಸ್ತೆ, 4ನೇ ಅಡ್ಡರಸ್ತೆ, ಎಂಸಿಸಿ, ಬಿ ಬ್ಲಾಕ್, ದಾವಣಗೆರೆ-577004. | ಎಸ್‌ಸಿ (ಎಫ್) | 15.02.1968 | ಪ್ರಾ.ಆ.ಕೇಂದ್ರ, ಅರಸೀಕೆರೆ, ದಾವಣಗೆರೆ ಜಿಲ್ಲೆ. |
| 40. | ಡಾ: ನಂದಾ ಕೆ. 2760, 17ನೇ ಅಡ್ಡರಸ್ತೆ, 8 ಬಿ. ಮುಖ್ಯರಸ್ತೆ, ಬನಶಂಕರಿ 2ನೇ ಹಂತ, ಬೆಂಗಳೂರು-70. | ಎಸ್‌ಸಿ (ಎಫ್) | 30.03.1975 | ಸಾರ್ವಜನಿಕ ಆಸ್ಪತ್ರೆ, ಶಿಡ್ಲಘಟ್ಟ, ಕೋಲಾರ ಜಿಲ್ಲೆ. |
| 41. | ಡಾ: ಮೊಹ್ಮದ್ ಖದೀರ್ ಅಹ್ಮದ್ ಎಂ.ಎ. 397, ಇಸ್ಲಾಂಪುರ್, ದರ್ಗಾ, ಜೋಗಿಹಳ್ಳಿ ರಸ್ತೆ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ-561203. | ಸಿ-II (ಬಿ)(ಜಿ) | 20.04.1966 | ಸಾರ್ವಜನಿಕ ಆಸ್ಪತ್ರೆ, ಶೋರಾಪುರ, ಗುಲ್ಬರ್ಗಾ ಜಿಲ್ಲೆ. |
| 42. | ಡಾ: ಪದ್ಮ ಎ. ತಂದೆ: ಜಿ. ಆಂಜನೇಯಪ್ಪ, 44, ಪದ್ಮಶ್ರೀ, ಬರೋಡಾ ಬ್ಯಾಂಕ್ ಕಾಲೋನಿ, 7ನೇ ಫೇಸ್, ಪುಟ್ಟೇನಹಳ್ಳಿ, ಜೆ.ಪಿ. ನಗರ, ಬೆಂಗಳೂರು-78. | ಎಸ್‌ಸಿ (ಎಫ್) | 21.04.1969 | ಸಾರ್ವಜನಿಕ ಆಸ್ಪತ್ರೆ, ಬಾಗೇಪಲ್ಲಿ, ಕೋಲಾರ ಜಿಲ್ಲೆ. |
| 43. | ಡಾ: ಜಯಪ್ರಭಾ ವಿ. 1195 ರಾಜಾಗೃಹ ನಿವಾಸ, 4ನೇ ಅಡ್ಡರಸ್ತೆ, ಫೈಪ್‌ಲೈನ್, ರಾಬರ್ಟ್‌ಸನ್ ಪೇಟೆ, ಕೆ.ಜಿ.ಎಫ್. ಕೋಲಾರ ಜಿಲ್ಲೆ. | ಎಸ್‌ಸಿ (ಎಫ್) | 21.02.1974 | ಪ್ರಾ.ಆ.ಕೇಂದ್ರ, ಕುರೂಡಿ, ಕೋಲಾರ ಜಿಲ್ಲೆ. |
| 44. | ಡಾ: ರೇಣುಕಾ ಪ್ರಾ.ಆ.ಕೇಂದ್ರ, ಕಂದಿಗೆರೆ, ಚಿಕ್ಕನಾಯಕನಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ. | ಸಿ-III (ಎ)(ಜಿ) | 01.06.1969 | ಪ್ರಾ.ಆ.ಕೇಂದ್ರ, ಕಂದಿಗೆರೆ, ಚಿಕ್ಕನಾಯಕನಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ. |
| 45. | ಡಾ: ಸರಸ್ವತಿ ಎಸ್.ಆರ್. ಪತಿ: ಡಾ: ರಾಜೇಂದ್ರ ಸಿ. ಬಸರಿಗಿಡದ್, ನೆಹರೂ ರಸ್ತೆ, ಗದಗ್ ಜಿಲ್ಲೆ-582101. | ಸಿ-II (ಎ)(ಎಫ್) | 01.07.1966 | ಪ್ರಾ.ಆ.ಕೇಂದ್ರ, ಸೂಡಿ, ರೋಣ ತಾಲ್ಲೂಕು, ಗದಗ ಜಿಲ್ಲೆ. |
| 46. | ಡಾ: ಪೂರ್ಣಿಮಾ ದತ್ತಾತ್ರೇಯ ಜನ್ನು ಪತಿ: ಡಾ: ಕೆ.ಆರ್. ಶೇಠ್ ಮಿಷನ್ ಸ್ಕೂಲ್ ರಸ್ತೆ, ಅಂಚೆ ಪೆಟ್ಟಿಗೆ 23, ಕುಂದಾಪುರ ತಾಲ್ಲೂಕು, ಉಡುಪಿಜಿಲ್ಲೆ. | ಸಿ-II (ಎ)(ಎಫ್) | 03.08.1968 | ಪ್ರಾ.ಆ.ಕೇಂದ್ರ, ಹೆಬ್ರಿ, ಉಡುಪಿ ಜಿಲ್ಲೆ. |
| 47. | ಡಾ: ರಸಾಲ್ಕರ್ ಸಾರು ದತ್ತಾರಾವ್ ಫ್ಲಾಟ್ ನಂ. 278- ಕೆ. ವೀರೇಂದ್ರ ಪಾಟೀಲ್ ನಗರ ಜಿಡಿಎ ಬಡಾವಣೆ, ಸೇಡಂ ರಸ್ತೆ, ಗುಲ್ಬರ್ಗಾ ಜಿಲ್ಲೆ. | ಸಿ-II (ಎ)(ಎಫ್) | 17.08.1954 | ಪ್ರಾ.ಆ.ಕೇಂದ್ರ, ಯಡ್ರಾಮಿ, ಜೇವರ್ಗಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. |

**ಎಸ್. ಜಗದೀಶಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 1767

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-1 ಬಳ್ಳಾರಿ**

**ಪ್ರಕರಣ ಸಂಖ್ಯೆ: ಕಾಅಬ:ಕಾನಪ: ಫ್ಯಾ:400:04/1555, ದಿನಾಂಕ: 16ನೇ ಫೆಬ್ರವರಿ, 2004**

**ಅರ್ಜಿದಾರರು:**

1. ಶ್ರೀಮತಿ ಎಂ. ನಾಗಮ್ಮ
ಗಂ: ಲೇಟ್ ಮ್ಯಾಕಲ ಸಿದ್ದಯ್ಯ, ಕೂಲಿ, ವ:40 ವರ್ಷ, ವಾಸ: ಪಾತಕೊತ್ತ ಜೆರುವು, ಗುಂತಕಲ್ ಮಂಡಲ, ಗುತ್ತಿ ತಾಲ್ಲೂಕು, ಅನಂತಪುರ ಜಿಲ್ಲೆ.
2. ಶಿವ, ತಂದೆ: ಲೇಟ್ ಮ್ಯಾಕಲ ಸಿದ್ದಯ್ಯ, ವ:16 ವರ್ಷ, (ಮೃತನ ಮಗ)
3. ಲಿಂಗಮೂರ್ತಿ, ತಂದೆ:ಲೇಟ್ ಮ್ಯಾಕಲ ಸಿದ್ದಯ್ಯ, ವ:13 ವರ್ಷ (ಮೃತನ ಮಗ)
4. ರಾಮಲಿಂಗಯ್ಯ, ತಂದೆ: ಲೇಟ್ ಮ್ಯಾಕಲ ಸಿದ್ದಯ್ಯ, ವ:10 ವರ್ಷ (ಮೃತನ ಮಗ)
5. ಶ್ರೀ ಸುಂಕಣ್ಣ, ವ:85 ವರ್ಷ (ಮೃತನ ಮಗ)
6. ಶ್ರೀಮತಿ ವೆಂಕಟಮ್ಮ
ಗಂಡ: ಸುಂಕಣ್ಣ, ವ:75 ವರ್ಷ.
ವಾಸ: ಎಲ್ಲರೂ, ಪತಕೊತ್ತ ಜೆರುವು, ಗುಂತಕಲ್ ಮಂಡಲ, ಗುತ್ತಿ ತಾಲ್ಲೂಕು, ಅನಂತಪುರ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು**

1. ವೆಂಕಟರಾಮರೆಡ್ಡಿ ತಂದೆ: ಲಕ್ಷ್ಮಿರೆಡ್ಡಿ
ವ:46 ವರ್ಷ. ಲಾರಿ ಮಾಲಿಕರು,
ಲಾರಿ ವಾಹನ ಸಂಖ್ಯೆ:ಎಪಿ-02-ಯು-7788, ಅಂಕಿರೆಡ್ಡಿ ಪಲ್ಲಿ ಗ್ರಾಮ, ಕೊಲೆಮಿಗುಂಡ್ಲು ಮಂಡಲಮ್, ಕರ್ನೂಲ್ ಜಿಲ್ಲೆ.
2. ದಿ. ಮ್ಯಾನೇಜರ್, ಮೆ. ರಾಯಲ್ ಸುಂದರಮ್ ಅಲೈಯನ್ಸ್ ಇನ್ಸೂರೆನ್ಸ್ ಕಂ.ಲಿ., 46 ವೈಟ್ಸ್ ರೋಡ್, ಚೆನ್ನೈ-600014.

**ಪ್ರಕಟಣೆ**

ಶ್ರೀಮತಿ ಎಂ. ನಾಗಮ್ಮ ಗಂಡ: ಮೃತ ಮ್ಯಾಕಲ ಸಿದ್ದಯ್ಯ ಹಾಗೂ ಇತರೆ 5 ಜನ ಇವರಾದ ತಾವು ಮೃತ ಮ್ಯಾಕಲ ಸಿದ್ದಯ್ಯ, ಮಾಲಿಕರಾದ ವೆಂಕಟರಾಮರೆಡ್ಡಿ ಅವರ ಬಳಿ ಕೆಲಸ ಮಾಡುತ್ತಿದ್ದಾಗ ಉಂಟಾದ ಸಾವಿಗಾಗಿ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಈ ಅಪಘಾತವು ಮಾಲಿಕರಲ್ಲಿ ಕೆಲಸ ಮಾಡುತ್ತಿದ್ದಾಗ ಆಗಿ ಮರಣ ಹೊಂದಿರುತ್ತಾರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ, ಬೇರೆಯಾರಾದರೂ ಮೃತನ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲಿ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವನಾಯ್ಕ್**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ
ನಷ್ಟಪರಿಹಾರ ಆಯುಕ್ತರು, ಬಳ್ಳಾರಿ ಉಪ ವಿಭಾಗ-1, ಬಳ್ಳಾರಿ.

ಪಿ.ಆರ್. 1768

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-1 ಬಳ್ಳಾರಿ**

**ಪ್ರಕರಣ ಸಂಖ್ಯೆ: ಕಾಅಬ:ಕಾನಪ: ಫ್ಯಾ:ಸಿಆರ್:416/04/1554, ದಿನಾಂಕ: 14ನೇ ಡಿಸೆಂಬರ್, 2004**

**ಅರ್ಜಿದಾರರು:**

1. ಶ್ರೀಮತಿ ವೈ. ಲಕ್ಷ್ಮಿದೇವಿ
ಗಂಡ: ಮೃತ ಅಂಜನೇಯಲು,
ವಯಸ್ಸು: 40 ವರ್ಷ. ವೃತ್ತಿ: ಕೂಲಿ.
ವಾಸ: ಪಾತಕೊತ್ತ ಚರುವು,
ಗುಂಟಕಲ್ ಮಂಡಲ, ಗುತ್ತಿ ತಾಲ್ಲೂಕು, ಅನಂತಪುರ ಜಿಲ್ಲೆ. ಮತ್ತು ಇತರರು.

**ವಿರುದ್ಧ**

**ಪ್ರತಿವಾದಿಗಳು**

1. ಟಿ. ವೆಂಕಟರಾಮರೆಡ್ಡಿ, ತಂದೆ: ಲಕ್ಷ್ಮಿರೆಡ್ಡಿ, ವಯಸ್ಸು:46 ವರ್ಷ ಲಾರಿ ಮಾಲಿಕರು, ಲಾರಿ ವಾಹನ ಸಂಖ್ಯೆ: ಎಪಿ-02:ಯು-77889, ಅಂಕಿರೆಡ್ಡಿ ಪಲ್ಲಿ ಗ್ರಾಮ, ಕೂಲಿಮಿಗುಡ್ಲಮಂಡಲಮ್, ಕರ್ನೂಲ್ ಜಿಲ್ಲೆ.
2. ದಿ. ಮ್ಯಾನೇಜರ್, ಮೆ: ರಾಯಲ್ ಸುಂದರಮ್ ಅಲೈಯನ್ಸ್ ಇನ್ಸೂರೆನ್ಸ್ ಕಂ.ಲಿ., 46 ವೈಟ್ಸ್ ರೋಡ್, ಚೆನ್ನೈ.

**ಪ್ರಕಟಣೆ**

ಶ್ರೀಮತಿ ವೈ. ಲಕ್ಷ್ಮಿದೇವಿ ಗಂಡ: ಮೃತ ಆಂಜಿನೇಯಲು ಇವರಾದ ತಾವು ಮೃತ ಆಂಜಿನೇಯಲು, ಮಾಲಿಕರು ಇವರ ಗಂಡ ಎಂದು ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಆಂಜನೇಯಲು ಮಾಲಿಕ ರವರು ಪ್ರತಿವಾದಿಗಳಾದ ಟಿ. ವೆಂಕಟರಾಮರೆಡ್ಡಿ ತಂದೆ: ಲಕ್ಷ್ಮಿರೆಡ್ಡಿ, ಲಾರಿಮಾಲಿಕರು, ಲಾರಿ ವಾಹನ ಸಂಖ್ಯೆ: ಎಪಿ-02:ಯು-7788, ಅಂಕಿರೆಡ್ಡಿ ಪಲ್ಲಿ ಗ್ರಾಮ, ಕೂಲಿ, ಮಿಗುಡ್ಲ ಮಂಡಲಮ್ ಕರ್ನೂಲ್ ಜಿಲ್ಲೆ ಇವರ ಬಳಿ ಕೂಲಿಯಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದರಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ, ಬೇರೆಯಾರಾದರೂ ಮೃತನ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲಿ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವನಾಯ್ಕ್**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ
ನಷ್ಟಪರಿಹಾರ ಆಯುಕ್ತರು, ಬಳ್ಳಾರಿ ಉಪ ವಿಭಾಗ-1, ಬಳ್ಳಾರಿ.

ಪಿ.ಆರ್. 1769

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-1 ಬಳ್ಳಾರಿ**

**ಪ್ರಕರಣ ಸಂಖ್ಯೆ: ಕಾಅಬ:ಕಾನಪ: ಫ್ಯಾ:ಸಿಆರ್:417/04/1553, ದಿನಾಂಕ: 14ನೇ ಡಿಸೆಂಬರ್, 2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು**

ಅರ್ಜಿದಾರರು:

1. ಶ್ರೀ ತಿಪ್ಪೇಸ್ವಾಮಿ,
ತಂದೆ: ಲೇಟ್ ಎ.ಸಿದ್ದಪ್ಪ,
7ನೇ ವಾರ್ಡ್, ಎಸ್.ಆರ್. ನಗರ, ರಾಮಾಲಿಸ್ವಾಮಿ
ಮಸೀದಿ ಹತ್ತಿರ, ಹೊಸಪೇಟೆ.
ಮತ್ತು ಇತರರು.

ಪ್ರತಿವಾದಿಗಳು:

1. ವಿ. ತಿರುಪತಿನಾಯ್ಡು, ತಂದೆ: ವಿ. ರಾಮಿರೆಡ್ಡಿ, ಲಾರಿ ಮಾಲಿಕರು,
ಲಾರಿ ಸಂಖ್ಯೆ: ಕೆಎ-35:2526 ರೈಲ್ವೇ ಕಾಂಟ್ರಾಕ್ಟರ್, ಮುನಿಸ್ವಾಮಿ
ಕಾಂಪೌಂಡ್ ಪಟೇಲ್ ನಗರ, ಹೊಸಪೇಟೆ.
2. ಡಿವಿಜನಲ್ ಮ್ಯಾನೇಜರ್,
ಮೆ: ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ.,
ಪಾರ್ವತಿ ನಗರ, ಬಳ್ಳಾರಿ.

**ಪ್ರಕಟಣೆ**

ಶ್ರೀ ತಿಪ್ಪೇಸ್ವಾಮಿ ತಂದೆ: ಲೇಟ್ ಸಿದ್ದಪ್ಪ ಇವರಾದ ತಾವು ಮೃತ ಶ್ರೀಮತಿ ಎ. ಸಕ್ಕೂಬಾಯಿ, ಲೋಡರ್ ಇವರು ವಿ. ತಿರುಪತಿನಾಯ್ಡು ಲಾರಿ ಮಾಲೀಕರು ಇವರ ಹತ್ತಿರ ಕೆಲಸ ಮಾಡುತ್ತಿದ್ದಾಗ ಮರಣ ಹೊಂದಿರುತ್ತಾರೆಂದು ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸಕ್ಕುಬಾಯಿ ಪ್ರತಿವಾದಿಗಳಾದ ವಿ. ತಿರುಪತಿ ನಾಯ್ಡು, ಲಾರಿ ಮಾಲಿಕರು, ಲಾರಿ ನಂ. ಕೆಎ-35:2526ರಲ್ಲಿ ಕೆಲಸ ಮಾಡುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದರಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ, ಬೇರೆಯಾರಾದರೂ ಮೃತನ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲಿ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವನಾಯ್ಕ್**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ
ನಷ್ಟಪರಿಹಾರ ಆಯುಕ್ತರು, ಬಳ್ಳಾರಿ ಉಪ ವಿಭಾಗ-1, ಬಳ್ಳಾರಿ.

ಪಿ.ಆರ್. 1770

**IN THE COURT OF THE COMMISSIONER FOR WORKMEN'S COMPENSATION, BIDAR**

**PROCLAMATION**

**No.LOB/WCA/Cr-60/2004**

**Applicants:** **V/s** **Respondents:**

Applicants:

Usha Bai, W/o Late Dilip Warwottee, Age: above 32 Yrs.
Occ. Hosuehold village Jajan Mugoli Tq: Basawakalyana District-Bidar.

Respondents:

1. Shaji, S/o. Dallu Bhosale
Age Major, Occ. Business,
R/o. Village Jajan Mugoli Tq:District-Bidar.
2. National Insurance Co.Ltd.,
Super Market Gulbarga.

Smt. Usha Bai W/o. Dilip Warwottee, R/o Village Jajan Mugoli Tq: Basawakalyan District Bidar have/has filed application in this court claiming compensation stating that Late: Dilip Warwottee was working as Driver Under the Respondent No.I he met with an accident arising out of and during the course of employment as a result he died on 15-11-2003.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

COMMISSIONER FOR WORKMEN'S
COMPENSATION, BIDAR.

PR-1771

**FROM NO.151**

**[See Rule 315]**

**Member's Voluntary Winding-Up**

**Notice of Appointment of Liquidator pursuant to Section 516**

| | |
|---|---|
| Name of the Company : | SpinCircuit Technologies India Private Limited. |
| Nature of business: | Development and export of computer software. |
| Address of Registered Office: | 11, Jeevan Bhima Nagar Main Road, Bangalore-560005. |
| Name(s) and address (es) of Liquidator(s): | Ralph C Robert, No.5, Ahmed Sait Road, Frazer Town, Bangalore-560005. |
| Date of appointment: | December 16, 2004 |
| By whom appointed: | By the members of the Company. |

Place: Bangalore:
Date: December 22, 2004.

**RALPH C. ROBERT**
LIQUIDATOR.

**FROM NO.152**
**[See Rule 315]**
**Companies Act, 1956**
**Member's Voluntary Winding-Up**
**Notice of Appointment of Liquidator pursuant to Section 516**

Name of the Company : SpinCircuit Technologies India Private Limited.
Nature of business: Development and export of computer software.
Presented by: Ralph c Robert, Liquidator.

To,
The Registrar of Compneis,
in Karnataka,
Bangalore.

I, Ralph C Robert, S/o. C.W. Robert, residing at No.5, Ahmed Sait Road, Frazer Town, Bangalore-560005 do hereby give notice that I have been appointed as Liquidator of SpinCircuit Technologies India Private Limited by special resolution of the company, Dated: December 16, 2004.

Place: Bangalore: **RALPH C. ROBERT**
Dated the 22nd Day of December, 2004. LIQUIDATOR.

**SPINCIRCUIT TECHNOLOGIES INDIA PRIVATE LIMITED**
**Regd Office.11, Jeevan Bhima Nagar Main Road, Bangalore-560008**
**NOTICE**

NOTICE is hereby given pursuant to Section 485 of the Companies Act, 1956 that the members of the above company have at the Extra-ordinary General Meeting held on December 16, 2004 passed a special resolution to wind up the company as "Members Voluntary Winding up" and appointed Mr Ralph C Robert, Chartered Accountant, as the Liquidator of the company, as per the provisions of the Companeis Act, 1956.

Place: Bangalore: **RALPH C. ROBERT**
Date: December 22, 2004. LIQUIDATOR.
PD-84

**ಸಮಾಜ ಕಲ್ಯಾಣ ಇಲಾಖೆ**
**ಅಧಿಸೂಚನೆ**
**ಸಂಖ್ಯೆ: ಸಕಇ 133 ಬಿಇಟಿ 2004, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್, 2004**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಕಇ 133 ಬಿಇಟಿ 2004, ಇದನ್ನು ಭಾಗಶಃ ಮಾರ್ಪಡಿಸಿ, ಶ್ರೀ ರಂಗುಭೀಮುಲು ಪವಾರ್, ಹಿರಿಯ ಶ್ರೇಣಿ ಉಪನ್ಯಾಸಕರು, ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜು, ಇವರನ್ನು ಹಿಂದುಳಿದ ವರ್ಗಗಳ ಇಲಾಖೆಯ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ ವೃಂದದ ವೇತನ ಶ್ರೇಣಿ ರೂ.7400-13120ರ ವೇತನದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶವಾಗುವವರೆಗೆ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಿಲ್ಲಾಧಿಕಾರಿ, ಬಿಜಾಪುರ ಈ ಹುದ್ದೆಗೆ ನಿಯೋಜನೆ ಮೇಲೆ ನೇಮಿಸಿರುವ ಆದೇಶವನ್ನು ಸ್ಥಿರೀಕರಿಸಿದೆ. ಹಾಗೂ ಸದರಿ ಅಧಿಕಾರಿಯು ತಕ್ಷಣವೇ ನೇಮಿಸಿ ವರ್ಗಾಯಿಸಿರುವ ಸ್ಥಳಕ್ಕೆ ಹಾಜರಾಗಲು ಸೂಚಿಸಿದೆ.

ಶ್ರೀ ಎಸ್.ಎಂ. ಕಣಬೂರು, ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಿಲ್ಲಾಧಿಕಾರಿ, ಬಿಜಾಪುರ ಇವರನ್ನು ಮಾತೃ ಇಲಾಖೆಯಿಂದ ಪದವಿಪೂರ್ವ ಶಿಕ್ಷಣ ಇಲಾಖೆಗೆ ಹಿಂತಿರುಗಿಸಲಾಗಿರುವ ಆದೇಶವನ್ನು ಮಾರ್ಪಡಿಸಿ ಸದರಿಯವರನ್ನು ಶ್ರೀ ಸಿ.ಆರ್. ತೊರವಿ, ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ, ಬಾಗಲಕೋಟೆ ಇವರ ಸ್ಥಳಕ್ಕೆ ವರ್ಗಾಯಿಸಲಾಗಿದೆ.

ಶ್ರೀ ಸಿ.ಆರ್. ತೊರವಿ, ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ, ಬಾಗಲಕೋಟೆ, ಇವರನ್ನು ತಕ್ಷಣವೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶವಾಗುವವರೆಗೆ ದಕ್ಷಿಣ ಕನ್ನಡ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಿಲ್ಲಾಧಿಕಾರಿ ಹುದ್ದೆಗೆ ನೇಮಿಸಿ ಆದೇಶಿಸಿದೆ.

ವರ್ಗಾವಣೆಗೊಂಡ ಅಧಿಕಾರಿಗಳು ವರ್ಗಾಯಿಸಿದ ಸ್ಥಳಕ್ಕೆ ತಕ್ಷಣವೇ ಹಾಜರಾಗಿ ಸರ್ಕಾರಕ್ಕೆ ವರದಿ ಮಾಡಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಮರುಳಸಿದ್ದಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 1772

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು**

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಹೇರಂದಪ್ಪನಹಳ್ಳಿ ಗ್ರಾಮದಲ್ಲಿ ಬ್ಲಾಕ್ ಗ್ರಾನೈಟ್‌ಗಾಗಿ ಶ್ರೀ ಸಿಂಗಯ್ಯ ಬಿನ್ ಚಿಲುವಯ್ಯ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತಿಗ ಸಂಖ್ಯೆ: 554ರ ಗುತ್ತಿಗೆಯನ್ನು ಲ್ಯಾಪ್ಸ್‌ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ.

**ಉಲ್ಲೇಖ :** 1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ: ಡಿಸಿಬಿ: ಕಗಗು 554: 2004-05, 2851 ದಿನಾಂಕ: 29.08.2004.
2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ: ಉನಿಕ: ಡಿ.ಸಿ.ಬಿ.ಕಗಗು 554: 2004-05:4913 ದಿನಾಂಕ: 24.07.2004.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಹೇರಂದಪ್ಪನಹಳ್ಳಿ ಗ್ರಾಮದ ಸರ್ವೆ ನಂ. 299 ರಲ್ಲಿ ಶ್ರೀ ಸಿಂಗಯಯ್ಯ ಬಿನ್ ಚೆಲುವಯ್ಯ ರವರಿಗೆ 0.20 ಎಕರೆಗೆ ದಿನಾಂಕ: 23.10.2002 ರಿಂದ 10 ವರ್ಷಗಳಿಗೆ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರಗಳಂತೆ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 4,985/-ಗಳನ್ನು ಪಾವತಿ ಗುತ್ತಿಗೆ ನಿಷ್ಕ್ರಿಯಗೊಳಿಸಿರುವ ಬಗ್ಗೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1)ರಂತೆ ಸರ್ಕಾರದ ಅಧಿಸೂಚನೆ-III ಸಂಖ್ಯೆ: ಸಿಐ 418 ಎಂ.ಆರ್.ಸಿ 92 ದಿನಾಂಕ: 02.07.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲಾಗಿದೆ.

**ಆದೇಶ ಸಂಖ್ಯೆ: ಗಭೂಇ: ಡಿಸಿಬಿ: ಕಗಗು:554: 2004-05, 13720, ದಿನಾಂಕ: 20ನೇ ಡಿಸೆಂಬರ್, 2004**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ಹೇರಂದಪ್ಪನಹಳ್ಳಿ ಗ್ರಾಮದ ಸರ್ವೆ ನಂ. 294ರಲ್ಲಿ 0.20 ಎಕರೆಗೆ ಬ್ಲಾಕ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 554 ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲಾಗಿದೆ.

ಪಿ.ಆರ್. 1773 ನಿರ್ದೇಶಕರು.

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ನಾರಾಯಣಪುರ ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಶ್ರೀ ಡಿ. ನಾಗರಾಜ್ ದಾಸೇಗೌಡ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತಿಗ ಸಂಖ್ಯೆ: 299ರ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ.

**ಉಲ್ಲೇಖ :** 1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ: ಡಿಸಿಬಿ: ಕಗಗು299: 2003-04, 160 ದಿನಾಂಕ: 12.04.2004.
2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ: ಉನಿಕ: ಡಿ.ಸಿ.ಬಿ.ಕಗಗು 299: 2004-05:6784 ದಿನಾಂಕ: 09.08.2004.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಹೇರಂದಪ್ಪನಹಳ್ಳಿ ಗ್ರಾಮದ ಸರ್ವೆ ನಂ. 61 ರಲ್ಲಿ ಶ್ರೀ ಡಿ. ನಾಗರಾಜ ಬಿನ್ ದಾಸಗೌಡ ರವರಿಗೆ 1.00 ಎಕರೆಗೆ ದಿನಾಂಕ: 27.01.2000 ರಿಂದ 10 ವರ್ಷಗಳಿಗೆ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರಗಳಂತೆ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 49,220/-ಗಳನ್ನು ಪಾವತಿ ಗುತ್ತಿಗೆ ನಿಷ್ಕ್ರಿಯಗೊಳಿಸಿರುವ ಬಗ್ಗೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1)ರಂತೆ ಸರ್ಕಾರದ ಅಧಿಸೂಚನೆ-III ಸಂಖ್ಯೆ: ಸಿಐ 418 ಎಂ.ಆರ್.ಸಿ 92 ದಿನಾಂಕ: 02.07.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲಾಗಿದೆ.

**ಆದೇಶ ಸಂಖ್ಯೆ: ಗಭೂಇ: ಡಿಸಿಬಿ: ಕಗಗು:299: 2004-05, 13711, ದಿನಾಂಕ: 20ನೇ ಡಿಸೆಂಬರ್, 2004**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ಹೇರಂದಪ್ಪನಹಳ್ಳಿ ಗ್ರಾಮದ ಸರ್ವೆ ನಂ. 61ರಲ್ಲಿ 1.00 ಎಕರೆಗೆ ಮಲ್ಟಿಕಲರ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 554 ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲಾಗಿದೆ.

ಪಿ.ಆರ್. 1774 ನಿರ್ದೇಶಕರು.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**ಪ್ರಕರಣ ಸಂಖ್ಯೆ: ಕಾನಪ: ಎಫ್-ಸಿಆರ್/ 23/04, ದಿನಾಂಕ: 14ನೇ ಡಿಸೆಂಬರ್, 2004**

| **ಅರ್ಜಿದಾರರು:** | ವಿರುದ್ಧ | **ಪ್ರತಿವಾದಿಗಳು** |
|---|---|---|
| 1. ಸಿ.ಆರ್. ಭಾನುಮತಿ. | | 1. ಕೆ.ಟಿ. ಶ್ರೀಶೈಲ |
| 2. ಡಿ.ಎಲ್. ಶ್ರೀನಿವಾಸ. | | ವಾಹನ ಮಾಲಿಕರು, ಚಿತ್ರದುರ್ಗ. |
| 3. ಲಕ್ಕಮ್ಮ | | 2. ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂಪನಿ. ಲಿ., ದಾವಣಗೆರೆ. |

**ಪ್ರಕಟಣೆ**

ಶ್ರೀಮತಿ ಸಿ.ಆರ್. ಭಾನುಮತಿ, ಡಿ.ಎಲ್. ಶ್ರೀನಿವಾಸ, ಲಕ್ಕಮ್ಮ ಇವರು, ತಾವು ಮೃತ ಡಿ.ಎನ್. ಲಕ್ಷ್ಮಣ ಇವರ ಹೆಂಡತಿ, ಮಗ ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಡಿ.ಎನ್. ಲಕ್ಷ್ಮಣ ಇವರು ಒಂದನೇ ಪ್ರತಿವಾದಿಗಳಾದ ಕೆ.ಟಿ. ಶ್ರೀಶೈಲ ಇವರಲ್ಲಿ ಬಸ್‌ಕಂಡಕ್ಟರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಬಂಧಿಸಿದ ಅಪಘಾತದಲ್ಲಿ ಮರಣ

ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧಿಸಿದ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಯನ್ನಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ
ನಷ್ಟಪರಿಹಾರ ಆಯುಕ್ತರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್. 1775

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ-2, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು-29**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ: ಎಫ್‌ಸಿ-46: 2004, ದಿನಾಂಕ: 26ನೇ ಅಕ್ಟೋಬರ್, 2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು**

1. ಶ್ರೀಮತಿ ನಂದಮ್ಮ
ಕೋಂ ಲೇಟ್ ಗೋವಿಂದಯ್ಯ,
ಕುಂಬಳಗೋಡು, ಮೈಸೂರು ರಸ್ತೆ,
ಬೆಂಗಳೂರು-74.

1. ಸಿ. ರಾಮಚಂದ್ರ, ಬಿನ್ ಲೇಟ್ ಕೆ. ಚಿಕ್ಕವೀರಯ್ಯ,
ಕುಂಬಳಗೋಡು ಅಂಚೆ, ಕೆಂಗೇರಿ ಹೋಬಳಿ, ಬೆಂಗಳೂರು.
2. ಶಾಖಾ ವ್ಯವಸ್ಥಾಪಕರು, ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ.,
ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ನಂದಮ್ಮ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಗೋವಿಂದಯ್ಯ, ಇವರು ಪ್ರತಿವಾದಿ ಒಂದು, ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಭಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಭಿತರು ಎಮದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲಿ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬೆಂಗಳೂರು
ಉಪವಿಭಾಗ-2, ಬೆಂಗಳೂರು.

ಪಿ.ಆರ್. 1776

**KARNATAKA POWER TRANSMISSION CORPORATION LIMITED**
**OFFICE OF THE EXECUTIVE ENGINEER ELECT., MAJOR WORKS DIVISION, KPTCL, N.R. MOHALLA, MYSORE-7**
**No. EEE/EE (N/C) (O)/ MWD/MYS/ 3381-84, Dated: 6th November, 2004**
**DRAFT NOTIFICATION**

Karnataka Power Transmission Corporation Limited has formulated a scheme under section 28 and clause (e) of section 18 of the Electricity supply Act 1948 and the scheme is herewith published in pursuance of section 29(2) of the said Act, this notification is isssued for information of the license holders and any other concerned persons. Particulars of the scheme are as hereunder.

| | | |
|---|---|---|
| Name of the Work | : | Construction of 66KV SC line on DC Towers from existing 66/11KV Devanur S/S to the proposed 66/11KV S/S @ Suttur in Nanjangud Taluk for a distance of 10.20 Kms. |
| Salient Features and | : | To Improve Voltage condition & To meet future Load growth of suttur & its Surrounding areas. |
| Areas Passing through | : | Village Limits of devanur, Tagadur, Kiragunda, Sannimallapura, Belagunda, Suttur. |
| Approximate length of the line | : | 10.20 Kms. |
| Approximate Cost | : | 111.72 Lakhs. |

KPTCL shall have and exercise all powers which the telegraph authorities possess under part-III of the Indian Telegraph Act 1985 (13 of 1985) for implementation of the above said scheme. Any objections regarding the above scheme shall be sent to the Executive Engineer Elecl., Major works Division, KPTCL, Mysore-7 within two months from the date of Publication of this notification for KPTCL's, pursuance.

Executive Engineer Elecl.
KPTCL, M.W. Division, Mysore.

PD-85